# ಕನ್ನಡ ಜನಪದ ಕಥೆಗಳಲ್ಲಿ ಉಪಾಯಗಾರ ನಾಯಕರು

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಸಂಶೋಧನಾ ಪ್ರಬಂಧ)


ಸಂಶೋಧಕರು
ಶಿವಾನಂದ ಪಾಲಿಕಾರ

ಮಾರ್ಗದರ್ಶಕರು
ಡಾ.ರಹಮತ್ ತರೀಕೆರೆ
ಪ್ರಾಧ್ಯಾಪಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬








ಭಾಷಾ ನಿಕಾಯ
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬
೨೦೧೩

# ಕನ್ನಡ ಜನಪದ ಕಥೆಗಳಲ್ಲಿ ಉಪಾಯಗಾರ ನಾಯಕರು

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಸಂಶೋಧನಾ ಪ್ರಬಂಧ)


ಸಂಶೋಧಕರು

**ಶಿವಾನಂದ ವಾಲಿಕಾರ**

ಮಾರ್ಗದರ್ಶಕರು

**ಡಾ.ರಹಮತ್ ತರೀಕೆರೆ**

ಪ್ರಾಧ್ಯಾಪಕರು

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ – ೫೮೩ ೨೭೬





ಭಾಷಾ ನಿಕಾಯ

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ–೫೮೩ ೨೭೬

೨೦೧೩

# ಪ್ರಮಾಣ ಪತ್ರ

**"ಕನ್ನಡ ಜನಪದ ಕಥೆಗಳಲ್ಲಿ ಉಪಾಯಗಾರ ನಾಯಕರು"** ಎಂಬ ಶೀರ್ಷಿಕೆಯ ಸಂಶೋಧನಾ ಪ್ರಬಂಧವನ್ನು ಪ್ರಾಧ್ಯಾಪಕರಾದ **ಡಾ.ರಹಮತ್ ತರೀಕೆರೆ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಕನ್ನಡ ವಿಶ್ವವಿದ್ಯಾಲಯದ **ಭಾಷಾ ನಿಕಾಯದ ಕನ್ನಡ ಸಾಹಿತ್ಯ ಅಧ್ಯಯನ** ವಿಭಾಗಕ್ಕೆ ಎಂ.ಫಿಲ್ ಪದವಿಗಾಗಿ ಈ ಪ್ರಬಂಧವನ್ನು ಸಲ್ಲಿಸುತ್ತಿದ್ದೇನೆ.

ಪ್ರಸ್ತುತ ಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿಗಾಗಲಿ ಅಥವಾ ಇನ್ನಿತರ ಉದ್ದೇಶಗಳಿಗಾಗಲಿ ಬಳಸಿಕೊಂಡಿಲ್ಲವೆಂದು ಪ್ರಮಾಣಿಕರಿಸುತ್ತೇನೆ.

**ಶಿವಾನಂದ ವಾಲಿಕಾರ**
**ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ**
ಕನ್ನಡ ವಿಶ್ವವಿದ್ಯಾಲ, ಹಂಪಿ
ವಿದ್ಯಾರಣ್ಯ

ಸ್ಥಳ : ವಿದ್ಯಾರಣ್ಯ
ದಿನಾಂಕ : ೦೧.೦೬.೨೦೧೨

# ದೃಢೀಕರಣ ಪತ್ರ

**ಶಿವಾನಂದ ವಾಲಿಕಾರ** ಇವರು ಬರೆದು ಸಾದರಪಡಿಸಿದ **"ಕನ್ನಡ ಜನಪದ ಕಥೆಗಳಲ್ಲಿ ಉಪಾಯಗಾರ ನಾಯಕರು"** ಎಂಬ ಶೀರ್ಷಿಕೆಯ ಸಂಶೋಧನಾ ಪ್ರಬಂಧವು ಮೂಲ ಸಂಶೋಧನಾ ಕೃತಿಯಾಗಿದ್ದು, ಅವರು ನನ್ನ ಮಾರ್ಗದರ್ಶನದಲ್ಲಿ **ಕನ್ನಡ ವಿಶ್ವವಿದ್ಯಾಲಯದ ಭಾಷಾ ನಿಕಾಯದ ಕನ್ನಡ ಸಾಹಿತ್ಯ ಅಧ್ಯಯನ** ವಿಭಾಗಕ್ಕೆ **ಎಂ.ಫಿಲ್** ಪದವಿಗಾಗಿ ಈ ಸಂಶೋಧನಾ ಪ್ರಬಂಧವನ್ನು ಸಿದ್ಧಪಡಿಸಿದ್ದಾರೆ.

ಪ್ರಸ್ತುತ ಕಿರುಪ್ರಬಂಧ ಇಡಿಯಾಗಿ ಮತ್ತು ಬಿಡಿಯಾಗಿ ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

**ಡಾ.ರಹಮತ್ ತರೀಕೆರೆ**
ಮಾರ್ಗದರ್ಶಕರು
**ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ**
ಕನ್ನಡ ವಿಶ್ವವಿದ್ಯಾಲ, ಹಂಪಿ
ವಿದ್ಯಾರಣ್ಯ

ಸ್ಥಳ : ವಿದ್ಯಾರಣ್ಯ
ದಿನಾಂಕ : ೧.೮.೧೨

<u>ಪರಿವಿಡಿ</u>

ಅಧ್ಯಾಯ-೧

# ಅಧ್ಯಯನದ ಉದ್ದೇಶ, ಮಹತ್ವ, ವ್ಯಾಪ್ತಿ ಮತ್ತು ವಿಧಾನ

**ಪೀಠಿಕೆ**

ಕನ್ನಡ ಸಾಹಿತ್ಯದಲ್ಲಿ ಜನಪದ ಸಾಹಿತ್ಯವು ಬಹಳ ಮುಖ್ಯವಾದ ಒಂದು ಭಾಗವಾಗಿದೆ. ಮಹಾಕಾವ್ಯ, ತ್ರಿಪದಿ, ಗಾದೆ, ಒಗಟ್ಟು, ಲಾವಣಿ, ಒಡಪು ಮುಂತಾದ ಹಲವಾರು ಪ್ರಕಾರಗಳಲ್ಲಿ ಅದು ಲಭ್ಯವಿದೆ. ಇವುಗಳಲ್ಲೆಲ್ಲಾ ಕಥೆಯ ಪ್ರಕಾರವು ಮುಖ್ಯವೂ ಪ್ರಮಾಣದಲ್ಲಿ ದೊಡ್ಡದೂ ಆಗಿದೆ. ಇಂದಿಗೂ ಗ್ರಾಮೀಣ ಪ್ರದೇಶಗಳಲ್ಲಿ ನಗರ ಪ್ರದೇಶಗಳಲ್ಲಿ ಕಥೆ ಹೇಳುವ ಸಾವಿರಾರು ಜನ ಕಾಣಸಿಗುತ್ತಾರೆ. ಜನಪದ ಸಮುದಾಯಗಳು ತಮ್ಮ ದುಡಿಮೆಯ ಬೇಸರ ಕಳೆಯಲು ಕಥೆ ಹೇಳುವ ಮತ್ತು ಕೇಳುವ ಪದ್ಧತಿಯಿತ್ತು. ಹಿರಿಯರು ಮಕ್ಕಳ ಮುಂದೆ ಕಥೆ ಹೇಳುತ್ತಿದ್ದರು. ಅದು ಅವರ ಕಲ್ಪನಾಶಕ್ತಿಯನ್ನು ಬೆಳೆಸುವ ಕೆಲಸ ಮಾಡುತ್ತದೆ. ಅವರಲ್ಲಿ ಆಲೋಚನ ಕ್ರಮವನ್ನು ಬೆಳೆಸುವ ಕೆಲಸ ಮಾಡುತ್ತದೆ. ಕರ್ನಾಟಕದಲ್ಲಿ ಅನೇಕ ಹಬ್ಬಗಳಲ್ಲಿ ವ್ರತಗಳಲ್ಲಿ ಕಥೆ ಹೇಳಿಸುವ ಸಂಪ್ರದಾಯವಿದೆ. ಕಥೆಯನ್ನು ಬಿಟ್ಟು ಜನಪದರ ಬದುಕೆ ಇಲ್ಲವೆಂದು ಹೇಳಬಹುದು.

ಜನಪದ ಕಥೆಗಳು ಈಗ ಸಂಗ್ರಹಗೊಂಡು ಸಂಪಾದನೆಗೊಂಡು ಮುದ್ರಿತ ರೂಪದಲ್ಲಿ ಸಿಗುತ್ತಿರಬಹುದು. ಆದರೆ ಅವು ಮೂಲತಃ ಮೌಖಿಕವಾಗಿ ಹುಟ್ಟಿದವು. ಕಥೆ ಹೇಳಲು ಹೇಳುಗರು ಎಷ್ಟು ಮುಖ್ಯವೋ ಅದನ್ನು ಕೇಳಲು ಕೇಳುಗರೂ ಅಷ್ಟೇ ಮುಖ್ಯ. ಕೇಳುಗರಿಲ್ಲದೆ ಕಥೆ ಹುಟ್ಟುವುದೇ ಇಲ್ಲ. ಜನಪದ ಕಥೆಗಳಲ್ಲಿ ಮನುಷ್ಯರು ಮಾತ್ರ ಪಾತ್ರಗಳಾಗಿ ಬರುವುದಿಲ್ಲ. ಪ್ರಾಣಿ ಪಕ್ಷಿಗಳು ಮರಗಿಡಗಳು ಹಾಗೂ ಕೀಟಗಳು ಸಹ ಪಾತ್ರಗಳಾಗಿರುತ್ತವೆ. ದೇವತೆಗಳೂ ಪಾತ್ರಗಳಾಗಿರುತ್ತಾರೆ.

ಒಂದೆರಡು ನಿಮಿಷಗಳಲ್ಲಿ ಮುಗಿಯುವ ಚಿಕ್ಕಕಥೆಗಳು ಇರುವ ಹಾಗೆಯೇ ದಿನಗಟ್ಟಲೆ ಹೇಳಲಾಗುವ ಸುದೀರ್ಘ ಕಥೆಗಳೂ ಇವೆ. ಜನಪದ ಕಥೆಗಳ ಬಹಳ ಮುಖ್ಯ ಲಕ್ಷಣವೆಂದರೆ,

ಅವು ಏಕಕಾಲಕ್ಕೆ ಸ್ಥಳೀಯತೆ ಮತ್ತು ಜಾಗತಿಕ ಪ್ರಜ್ಞೆಯನ್ನು ಪಡೆದುಕೊಂಡಿರುವುದು. ತನ್ನ ವಿವರಗಳಲ್ಲಿ ಜನಪದ ಕಥೆಯು ಸ್ಥಳೀಯ ಬದುಕಿನ ಗರ್ಭದೊಳಗಿಂದಲೇ ಮೂಡುತ್ತದೆ. ಆದರೆ ಆಶಯದಲ್ಲಿ ಅದು ಜಾಗತಿಕವಾಗಿದೆ. ಹೀಗಾಗಿಯೇ ಒಂದೇ ಆಶಯದ ಕಥೆಗಳು ಜಗತ್ತಿನ ಬೇರೆ ಬೇರೆ ಕಡೆ ಸಿಗುತ್ತವೆ.

ಜನಪದ ಕಥೆಗಳು ಶಿಷ್ಟಸಾಹಿತ್ಯವೆಂದು ಕರೆಯುವ ಅಕ್ಷರ ರೂಪದಲ್ಲಿ ಸಿಗುವ ಸಾಹಿತ್ಯಕ್ಕಿಂತ ಅತಿ ಪ್ರಾಚೀನವಾದವು. ಕನ್ನಡ ಮೊಟ್ಟಮೊದಲ ಗದ್ಯಗ್ರಂಥವಾದ ಶಿವಕೋಟ್ಯಾಚಾರ್ಯನ 'ವಡ್ಡಾರಾಧನೆ'ಯು ಒಂದು ಕಥಾ ಸಂಕಲನವಾಗಿರುವುದು ಈ ದೃಷ್ಟಿಯಿಂದ ಗಮನಿಸಬೇಕಾದ ಸಂಗತಿಯಾಗಿದೆ. ಜನಪದ ಕಥೆಗಳು ಮೂಲತಃ ಗದ್ಯದಲ್ಲಿರುತ್ತವೆ. ಆದರೆ ಅನೇಕ ಕಥೆಗಳಲ್ಲಿ ಗದ್ಯದ ನಿರೂಪಣೆಯ ಜತೆ ಅಲ್ಲಲ್ಲಿ ಹಾಡುಗಾರಿಕೆಯೂ ಇರುತ್ತದೆ. ಕಥೆಯು ಮಾನವ ಸಮಾಜದ ಬೇರೆ ಬೇರೆ ಅನುಭವ ಲೋಕವನ್ನು ಕಾಣಿಸುವ ಬಹುಮುಖ್ಯ ಪ್ರಕಾರವಾಗಿದೆ. ಏಕೆಂದರೆ ಇಲ್ಲಿ ಪಾತ್ರಗಳಾಗಿ ರಾಜ ರಾಣಿ ಬರುತ್ತಾರೆ. ಮುದುಕರು ಮಕ್ಕಳು ಬರುತ್ತಾರೆ. ರೈತರು, ಚಮ್ಮಾರರು, ಬಡಿಗೇರರು, ವ್ಯಾಪಾರಿಗಳು, ಹೆಂಗಸರು, ಮುದುಕಿಯರು, ಸೈನಿಕರು, ಸೂಳೆಯರು, ಮೋಸಗಾರರು, ಕಳ್ಳರು ಬರುತ್ತಾರೆ. ಈ ಮಾನವಲೋಕದ ಜತೆ ಸಂಬಂಧವಿಟ್ಟುಕೊಂಡಂತೆ ಬೆಟ್ಟಗಳು, ಹೊಳೆಗಳು, ದೇವತೆಗಳು, ಪ್ರಾಣಿಪಕ್ಷಿ ಕೀಟಗಳು ಬರುತ್ತವೆ. ಇವುಗಳಲ್ಲಿ ಯಾವ ಪಾತ್ರವೂ ಚಿಕ್ಕದು ದೊಡ್ಡದಲ್ಲ. ಕುವೆಂಪು 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಆರಂಭದಲ್ಲಿ ಹೇಳುವಂತೆ, 'ಇಲ್ಲಿ ಯಾರೂ ಮುಖ್ಯರಲ್ಲ. ಯಾರೂ ಅಮುಖ್ಯರಲ್ಲ'. ಈ ದೃಷ್ಟಿಯಿಂದ ಜನಪದ ಕಥೆಗಳನ್ನು ಜನತೆಯ ಲೋಕದ ಸಮಾಜವಾದಿ ಅಭಿವ್ಯಕ್ತಿ ಎಂದೂ ಕರೆಯಬಹುದು.

ಜನಪದ ಕಥೆಗಳಲ್ಲಿ ಕೇವಲ ಮನೋರಂಜನೆ, ನೀತಿ ಬೋಧನೆ ಇರುವುದಿಲ್ಲ. ಅಲ್ಲಿ ಮಾನವ ಸಮಾಜದ ದುಃಖ, ತಲ್ಲಣ, ಸಂತಸ, ಹೋರಾಟ, ಬಿಕ್ಕಟ್ಟು, ಎಲ್ಲವೂ ಕಾಣಿಸಿಕೊಳ್ಳುತ್ತವೆ. ಆದರೆ ಜನಪದ ಕಥೆಗಳು ಕೊನೆಯಲ್ಲಿ ಸುಖಾಂತ್ಯಗೊಳ್ಳುತ್ತವೆ. ಈ ಮೂಲಕ ಬದುಕು ನಿರಂತರವಾಗಿ ಮುಂದುವರೆಯುತ್ತದೆ ಎಂಬ ತತ್ವವನ್ನು ಕಥೆಗಳು ಸೂಚಿಸುತ್ತವೆ. ಕಥೆಗಳು ಮಾನವ ಬದುಕಿನ ಅನೇಕ ಅನುಭವಲೋಕಗಳನ್ನು ಹಿಡಿದುಕೊಡುವ ಅತ್ಯಂತ ಸರಳ ಪ್ರಕಾರವಾಗಿದೆ. ಹೀಗಾಗಿ ಕಥೆಗಳಲ್ಲಿ ಸಾಂಸ್ಕೃತಿಕ ಲೋಕಗಳು ಬೇರೆ ಬೇರೆ ರೂಪದಲ್ಲಿ ಜೀವಂತ ಇರುತ್ತವೆ. ಇಂತಹ ಜನಪದ ಕಥೆಗಳನ್ನು ಸಂಶೋಧನೆಗೆ ಒಳಪಡಿಸುವುದು ಒಂದು ಶೈಕ್ಷಣಿಕ ಅಗತ್ಯ ಮಾತ್ರವಲ್ಲ, ಒಂದು ಸಾಂಸ್ಕೃತಿಕ ಮಹತ್ವದ ಚಟವಟಿಕೆಯೂ ಆಗಿದೆ.

## ಉದ್ದೇಶ ಮತ್ತು ಮಹತ್ವ

ಕನ್ನಡದಲ್ಲಿ ಅಪಾರ ಪ್ರಮಾಣದ ಜನಪದ ಕಥೆಗಳ ಸಾಹಿತ್ಯವು ಸಂಗ್ರಹಗೊಂಡು ಪ್ರಕಟಗೊಂಡಿದೆ. ಆದರೂ ಪ್ರಕಟಗೊಳ್ಳದೆ ಉಳಿದಿರುವ ಸಾಹಿತ್ಯವೂ ಅದಕ್ಕಿಂತಲೂ ಅಪಾರ ಪ್ರಮಾಣದಲ್ಲಿದೆ. ಕನ್ನಡ ಜನಪದ ಸಾಹಿತ್ಯವನ್ನು ಕುರಿತು ಇಲ್ಲಿಯತನಕ ಹಲವಾರು

ಅಧ್ಯಯನಗಳು ಬಂದಿವೆ. ಅವು ಹೆಚ್ಚಾಗಿ ಕಾವ್ಯವನ್ನು ಕುರಿತಾಗಿ ನಡೆದಿವೆ. ಇದಕ್ಕೆ ಹೋಲಿಸಿದರೆ ದೊಡ್ಡ ಪ್ರಮಾಣದಲ್ಲಿರುವ ಜನಪದ ಕಥೆಗಳ ಅಧ್ಯಯನ ಅಷ್ಟಾಗಿ ನಡೆದಿಲ್ಲ ಎನ್ನಬಹುದು. ಸಂಶೋಧನೆಗೆ ಆಕರವಾಗುವ ದೃಷ್ಟಿಯಲ್ಲಿ ಜನಪದ ಕಥೆ ನಿರ್ಲಕ್ಷಿತ ಸಾಹಿತ್ಯ ಪ್ರಕಾರವಾಗಿದೆ. ಆದ್ದರಿಂದ ಇದನ್ನು ಕುರಿತು ಅಧ್ಯಯನ ಮಾಡುವ ಶೈಕ್ಷಣಿಕ ಅಗತ್ಯವಿದೆ.

ಜನಪದ ಕಥೆಗಳಲ್ಲಿ ಜನ ಸಮುದಾಯದ ನಿತ್ಯ ಬದುಕಿನ ಘಟನೆಗಳು ವಿವರಗಳಾಗಿ ಬರುತ್ತವೆ. ಅವು ಜನರ ಸಾಮಾಜಿಕ ಆರ್ಥಿಕ, ರಾಜಕೀಯ ಚಿಂತನೆಗಳನ್ನು ಒಳಗೊಂಡಿವೆ. ಅಲ್ಲಿ ಮುಖ್ಯವಾಗಿ ಕಾಣುವುದು ಬೇರೆ ಬೇರೆ ಅಧಿಕಾರ ಶಕ್ತಿಗಳ ಚಿತ್ರಣ. ಉದಾಹರಣೆಗೆ ರಾಜ ದೈವ ಶ್ರೀಮಂತ ರಾಕ್ಷಸ ಹಿರಿಯರು ಮುಂತಾದವರು. ಈ ಅಧಿಕಾರಸ್ಥ ಶಕ್ತಿಗಳ ಎದುರು ದುರ್ಬಲರಾದ ಹಾಗೂ ಅಸಹಾಯಕರಾದ ಜನ ಬರುತ್ತಾರೆ. ಇವರು ಈ ಅಧಿಕಾರಸ್ಥ ಶಕ್ತಿಗಳನ್ನು ತಮ್ಮ ಸ್ವಂತ ಬಲದಿಂದ ಮುಖಾಮುಖಿ ಮಾಡುತ್ತಾರೆ. ಸ್ವಂತ ಬಲದ ಮೂಲಕ ಮುಖಾಮುಖಿ ಸಾಧ್ಯವಾಗದಿದ್ದರೆ ಉಪಾಯಗಳ ಮೂಲಕ ಮುಖಾಮುಖಿ ಮಾಡುತ್ತಾರೆ. ಈ ಮುಖಾಮುಖಿಯು ಅವರ ಜಾಣ್ಮೆ, ಪ್ರತಿಭೆ ಮತ್ತು ತಂತ್ರಗಾರಿಕೆಗಳನ್ನು ಪ್ರತಿಬಿಂಬಿಸುತ್ತದೆ. ಇಂತಹ ಉಪಾಯಗಾರ ನಾಯಕರ ಕಥೆಗಳನ್ನು ವಿಶ್ಲೇಷಣೆ ಮಾಡುವುದರಿಂದ ಜನಪದರ ಆಲೋಚನಾ ಕ್ರಮವನ್ನು ತಿಳಿಯಲು ಸಾಧ್ಯವಾಗುತ್ತದೆ. ಈ ಹಿನ್ನೆಲೆಯಲ್ಲಿ ಜನಪದ ಕಥೆಗಳಲ್ಲಿ ಬರುವ ಬೇರೆ ಬೇರೆ ಜಾಣ ನಾಯಕ–ನಾಯಕಿಯರನ್ನು ಕುರಿತು ಅಧ್ಯಯನ ಮಾಡುವುದು ಈ ಸಂಪ್ರಬಂಧದ ಉದ್ದೇಶವಾಗಿದೆ. ಈ ಅಧ್ಯಯನದಲ್ಲಿ ಮುಖ್ಯವಾಗಿ ಬಡವರು, ಅಂಗವಿಕಲರು, ವಯಸ್ಸಿನಲ್ಲಿ ಕಿರಿಯರು, ವೃದ್ಧರು ಹಾಗೂ ಮಹಿಳೆಯರು ತಮಗಿಂತ ಬಲಶಾಲಿಯಾದ ಎದುರಾಳಿಗಳನ್ನು ಮುಖಾಮುಖಿ ಮಾಡುವ ಹಾಗೂ ಗೆಲ್ಲುವ ಬಗೆಯನ್ನು ಚರ್ಚಿಸಲಾಗುವುದು.

ಈ ಚರ್ಚೆಯಿಂದ ಎರಡು ಬಗೆಯ ತಿಳುವಳಿಕೆ ಸಾಧ್ಯವಿದೆ. ೧. ಇಂತಹ ಉಪಾಯಗಾರಿಕೆಗಳು ಚರಿತ್ರೆಯಲ್ಲಿ ನಿರಂತರವಾಗಿರುವುದರನ್ನು ಗುರುತಿಸಲು ಸಾಧ್ಯವಾಗುವುದು. ೨. ಈ ಉಪಾಯಗಾರಿಕೆಗಳು ವರ್ತಮಾನದ ಬದುಕಿನಲ್ಲಿಯೂ ಹೇಗೆ ಕ್ರಿಯಾಶೀಲವಾಗಿವೆ ಎಂಬುದನ್ನು ತಿಳಿಯಲು ಸಾಧ್ಯವಾಗುವುದು.

ಜನಪದ ಕಥೆಗಳು ಶ್ರೀಸಾಮಾನ್ಯರ ಬದುಕಿನ ಮಹಾಕಾವ್ಯಗಳು ಎನ್ನಬಹುದು. ಅಲ್ಲಿ ಜನರ ಬಾಳಿನ ಅತ್ಯಂತ ಸಾಮಾನ್ಯ ಮತ್ತು ಸಣ್ಣಸಂಗತಿಗಳು ಬರುತ್ತವೆ. ಉದಾಹರಣೆಗೆ ಕಳ್ಳರು ಕದಿಯಲು ಮಾಡುವ ಬಗೆಬಗೆಯ ಉಪಾಯಗಳು; ಕಳ್ಳರಿಂದ ತಪ್ಪಿಸಿಕೊಳ್ಳಲು ಜನರು ಮಾಡುವ ಪ್ರತಿಉಪಾಯಗಳು; ಹೆಂಡತಿಯ ಸಿಟ್ಟು, ಗಂಡನ ಸೋಮಾರಿತನ, ಮಕ್ಕಳ ಹೊಣೆಗೇಡಿತನ ಅಥವಾ ಚುರುಕುತನ, ರಾಜನ ದಡ್ಡತನ, ರಾಣಿಯ ಜಾಣ್ಮೆ, ಜಿಪುಣನ ಜಿಪುಣತನ, ರೈತನ ಧೈರ್ಯ– ಹೀಗೆ ನಮ್ಮ ಬದುಕಿನಲ್ಲಿ ಸುತ್ತಮುತ್ತಲಿರುವ ಪಾತ್ರಗಳು ಮತ್ತು ಅವುಗಳ ವರ್ತನೆಗಳು ಜನಪದ ಕಥೆಗಳಲ್ಲಿ ಅವತರಿಸುತ್ತವೆ. ಈ ಪಾತ್ರಗಳ ಅಧ್ಯಯನ ಮಾಡುವುದೆಂದರೆ, ಜನರು ಬದುಕಲು ಮಾಡುತ್ತಿರುವ ಅನೇಕ ಬಗೆಯ ಸೆಣಸಾಟಗಳನ್ನು ಅರಿಯುವುದೇ ಆಗಿದೆ.

ಜನಪದ ಕಥೆಗಳಲ್ಲಿ ಜನ ತಮಗೆ ಎದುರಾಗುವ ಬಿಕ್ಕಟ್ಟುಗಳನ್ನು ಮುಖಾಮುಖಿ ಮಾಡುವ ಮತ್ತು ಅದರಿಂದ ಬಿಡಿಸಿಕೊಳ್ಳುವ ಬಗೆಯು, ಪರೋಕ್ಷವಾಗಿ ಅವರನ್ನು ಅದುಮಿಟ್ಟಿರುವ ವ್ಯವಸ್ಥೆಯನ್ನು ಅನಾವರಣಗೊಳಿಸುತ್ತದೆ. ಹೀಗಾಗಿ ಜನಪದ ಕಥೆಗಳಲ್ಲಿ ಸಾಮಾನ್ಯರ ಬದುಕನ್ನು ವಿಶ್ಲೇಷಿಸುವುದೆಂದರೆ ಅಧಿಕಾರಸ್ಥ ವ್ಯವಸ್ಥೆಯನ್ನು ವಿಶ್ಲೇಷಿಸುವುದೂ ಆಗಿದೆ.

ಜನಪದ ಕಥೆಗಳ ನಾಯಕರು ಕಷ್ಟಪಡುತ್ತಾರೆ ಆದರೆ ಸೋಲುವುದಿಲ್ಲ, ಸಾಯುವುದಿಲ್ಲ. ಇದು ಅವರ ಅದಮ್ಯವಾದ ಜೀವನ ಪ್ರೀತಿಯನ್ನೂ ಕಸುವನ್ನೂ ಸೂಚಿಸುವ ಮಹತ್ವದ ಸಂಗತಿಯಾಗಿದೆ. ಈ ಹಿನ್ನೆಲೆಯಲ್ಲಿ ಈ ಪ್ರಬಂಧವು ದಮನಿತ ಜನರ ಒಳಚೈತನ್ಯವನ್ನು ಶೋಧಿಸುವ ಕೆಲಸ ಮಾಡುತ್ತದೆ. ಮಹಿಳೆಯರ ಮತ್ತು ಬಡವರ ಅಂತಃಶಕ್ತಿಯನ್ನು ಶೋಧಿಸುವ ಕೆಲಸ ಮಾಡುತ್ತದೆ.

## ಅಧ್ಯಯನದ ವ್ಯಾಪ್ತಿ

'ಕನ್ನಡ ಜನಪದ ಕಥೆಗಳಲ್ಲಿ ಉಪಾಯಗಾರ ನಾಯಕರು' ಎಂಬ ವಿಷಯ ಕುರಿತು ಪ್ರಸ್ತುತ ಅಧ್ಯಯನಕ್ಕಾಗಿ ಕನ್ನಡ ಜನಪದ ಕಥೆಗಳಲ್ಲಿ ಭೌಗೋಳಿಕ ದೃಷ್ಟಿಯಿಂದ ಹೈದ್ರಾಬಾದ್ ಕರ್ನಾಟಕದ ಜಿಲ್ಲೆಗಳಾದ ಗುಲ್ಬರ್ಗಾ, ಬೀದರ್, ರಾಯಚೂರು, ಕೊಪ್ಪಳ ಪರಿಸರದ ಜನಪದ ಕಥೆಗಳನ್ನು ಆರಿಸಿಕೊಳ್ಳಲಾಗಿದೆ. ಹೈದ್ರಾಬಾದ್ ಕರ್ನಾಟಕಕ್ಕೆ ಲಗತ್ತಾಗಿರುವ ಬಳ್ಳಾರಿ ಜಿಲ್ಲೆಯ ಕಥೆಗಳನ್ನೂ ಪ್ರಾಸಂಗಿಕವಾಗಿ ಚರ್ಚೆಗೆ ಎತ್ತಿಕೊಳ್ಳಲಾಗಿದೆ.

## ಅಧ್ಯಯನ ವಿಧಾನ

ಪ್ರಸ್ತುತ ಅಧ್ಯಯನದಲ್ಲಿ ಪ್ರಕಟವಾಗಿರುವ ಜನಪದ ಕಥೆಗಳು ಅಧ್ಯಯನಕ್ಕೆ ಬಳಸಿಕೊಳ್ಳುವುದಿಲ್ಲ; ಬದಲಾಗಿ ಪ್ರಸ್ತುತ ಪ್ರಬಂಧದ ವಿಷಯಕ್ಕೆ ಲಗತ್ತಾಗಿರುವ, ಅಂದರೆ ಉಪಾಯಗಾರ ನಾಯಕರು ಕಾಣಿಸಿಕೊಳ್ಳುವ ಕಥೆಗಳನ್ನು ಮಾತ್ರ ಚರ್ಚೆಗೆ ಎತ್ತಿಕೊಳ್ಳಲಾಗುವುದು.

ಉಪಾಯಗಾರ ನಾಯಕರ ಉಪಾಯಗಳಿಗೆ ಅವರು ಹುಟ್ಟಿಬಂದ ಮತ್ತು ಬದುಕುತ್ತಿರುವ ಸಾಮಾಜಿಕ, ಆರ್ಥಿಕ, ಹಿನ್ನೆಲೆಗಳು ಕಾರಣವಾಗಿರುತ್ತವೆ. ಈ ಹಿನ್ನೆಲೆಯಲ್ಲಿ ಉಪಾಯಗಾರ ನಾಯಕರ ಉಪಾಯಗಾರಿಕೆಗೆ ಪರೋಕ್ಷವಾಗಿ ಕಾರಣವಾಗಿರುವ ಈ ಹಿನ್ನೆಲೆಗಳನ್ನು ಜತೆಯಲ್ಲೇ ಚರ್ಚಿಸಲಾಗುವುದು.

ಜನಪದ ಕಥೆಗಳು ಮನಶ್ಶಾಸ್ತ್ರೀಯ ಅಧ್ಯಯನ ಮಾಡುವುದಕ್ಕೆ ಒಳ್ಳೆಯ ಆಕರಗಳು. ಯಾಕೆಂದರೆ ಮನುಷ್ಯರಲ್ಲಿ ಉಪಾಯಗಳು ಹುಟ್ಟುವುದೇ ಅವರ ಮನಸ್ಸಿನಲ್ಲಿ. ಬೇರೆ ಬೇರೆ ಇಕ್ಕಟ್ಟಿನ ಸನ್ನಿವೇಶಗಳು ಎದುರಾದಾಗ ವ್ಯಕ್ತಿಗಳು ಹೇಗೆ ವರ್ತಿಸುತ್ತಾರೆ ಎಂಬುದನ್ನು ಈ ಕಥೆಗಳ ವಿಶ್ಲೇಷಣೆಯಲ್ಲಿ ನೋಡುವುದು ಸಾಧ್ಯವಿದೆ. ಹೀಗಾಗಿ ಇಲ್ಲಿ ಜನಪದ ಕಥೆಗಳಲ್ಲಿ ಬರುವ ಪಾತ್ರಗಳ ವರ್ತನೆಗಳನ್ನು ಅಧ್ಯಯನ ಮಾಡಲು ಕೂಡ ಯತ್ನಿಸಲಾಗುವುದು.

ಕನ್ನಡ ಜನಪದ ಕಥೆಗಳಲ್ಲಿ ಬಂದಿರುವ ಉಪಾಯಗಾರ ನಾಯಕರನ್ನು ಇಟ್ಟುಕೊಂಡು, ಆಧುನಿಕ ಕನ್ನಡದ ಕಾದಂಬರಿ ಕಥೆಗಳಲ್ಲಿ ಬರುವ ಉಪಾಯಗಾರ ನಾಯಕರ ಪಾತ್ರಗಳನ್ನು ತೌಲನಿಕವಾಗಿ ಅಧ್ಯಯನ ಮಾಡಲು ಇಲ್ಲಿ ಯತ್ನಿಸಲಾಗುವುದು.

## ಉಪಾಯಗಾರಿಕೆ: ಪರಿಕಲ್ಪನೆ

'ಉಪಾಯ' ಎಂಬ ಶಬ್ದಕ್ಕೆ ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿರುವ ನಿಘಂಟುವಿನಲ್ಲಿ ಈ ಕೆಳಕಂಡ ಅರ್ಥಗಳಿವೆ: ಹತ್ತಿರಕ್ಕೆ ಬರುವುದು; ಸಮೀಪಕ್ಕೆ ಸೇರುವುದು; ಸಾಧನ; ಯುಕ್ತಿ ಹಂಚಿಕೆ. ಇವುಗಳಿಂದ ಉಪಾಯಗಾರ ಯುಕ್ತಿವಂತ, ತಂತ್ರಿ ಪದಗಳು ಹುಟ್ಟಿವೆ.[1] ಉಪಾಯಕ್ಕೆ ಸಂವಾದಿಯಾಗಿರುವ ಪದಗಳನ್ನು ಡಾ. ಪ್ರಶಾಂತ ಮಾಡ್ತ ಅವರು ತಮ್ಮ ಸಮಾನಾರ್ಥಕ ನಿಘಂಟುವಿನಲ್ಲಿ ಈ ರೀತಿಯಾಗಿ ಕೊಟ್ಟಿರುವರು: ಉಪಾಯ, ಹುನ್ನಾರ, ಅಪೇಕ್ಷೆ, ಆಡಳಿತ ವೈಖರಿ, ಆಧಾರ, ಉದ್ದೇಶ, ಕಾರಣ, ಕಾರ್ಯವೈಖರಿ, ಕಿಟಕು, ಕಟುಕು, ಗತಿ, ಗುಂಟ, ಗುರಿ, ಡೀಕು, ತೆರ, ನೆಪ, ನೆವ, ಪದರ, ಪ್ರಕಾಶ, ಪ್ರಕ್ರಿಯೆ, ಬಗೆ, ಬೆಡಗು, ಮಜಲು, ಮಾಟ, ಮಾದರಿ, ಮೂಲಕ, ಮೂಲ ಅಂಶ, ಮಳ್ಳೆ, ರೂಪ, ಲಕ್ಷಣ, ಲಕ್ಷ್ಯ, ವಿಧ, ವೈಖರಿ, ಶೈಲಿ, ಸಮಯಾಚಾರ, ಸರಣಿ, ಸಲವು, ಸಾಗಣೆ, ಹೇತು, ಯುಕ್ತಿ, ಇಲಾಜು, ಉಪಪತ್ತಿ, ಕಸರತ್ತು, ಕಾರ್ಯತಂತ್ರ, ಕಾರ್ಯವಿಧಾನ, ಕಾಲುಮಣಿ, ಕ್ರತು, ಕ್ರಮ, ಗಮನ, ಜಕುತಿ, ನಡಗೆ, ನಿಮಿತ್ತ, ನೈಪುಣ್ಯ, ತಂತುರ, ತರಹ, ತಳೆಪಾಯ, ತೋದು, ದೀಮಸ, ಥರ, ಧರ್ಮ, ನಯ, ನಿಭ, ಪರಿ, ಪರಿಶ್ರಮ, ಪರ್ಯಾಯ, ಪವಣು, ಪ್ರತಿಕರ್ಮನ್, ಬಳಕೆ, ಬುನಾದಿ, ಮಸಲತ್ತು, ಮಾರಿಫತ್ತು, ಮಾರ್ಗ, ಮುಖ, ಯಂತ್ರ ತಂತ್ರ, ಯುಕ್ತಿ ಪ್ರಯುಕ್ತಿ, ರಪಣ, ರೂಢಿ, ವಯಿನ, ವಿಧಾನ, ವ್ಯಪದೇಶ, ವೈಪು, ಸಂಚನೆ, ಸಂತನೆ, ಸಂಚು, ಸಮಂತು, ಸಾಧನ, ಸಾಧನೆ, ಸೋಪಾನ, ಸೋಹ, ಹಕ್ಕಿ, ಹದ, ಹದನ, ಹದಿನ, ಹರುವು, ಹವಣ, ಹವಣಿಕೆ, ಹಿಕ್ಕೆಡಿ, ಹಿಕ್ಮತ್ತು, ಹುನ್ನಾರು, ಹೊಲಬು.[2]

ಸಂಸ್ಕೃತ ತಂತ್ರ ಎಂಬ ಶಬ್ದದಿಂದ, ತಂತ್ರಗಾರಿಕೆ, ತಂತ್ರಗಾರ ಎಂಬ ಪದಗಳು ಸೃಷ್ಟಿಯಾಗಿವೆ. ಉರ್ದು ಮತ್ತು ಫಾರಸಿಯಲ್ಲಿ ಉಪಾಯಕ್ಕೆ ಹಿಕಮತ್ ಎಂದು ಕರೆಯುತ್ತಾರೆ. ಇದರಿಂದ ಹಿಕಮತ್‌ಗಾರ ಎಂಬ ಪದವು ಸೃಷ್ಟಿಯಾಗಿದೆ.

ಕನ್ನಡದಲ್ಲಿ ಜಾಣ ಎಂಬ ಶಬ್ದವಿದೆ. ಅದು ಉಪಾಯಗಾರಿಕೆಯನ್ನು ಮಾತ್ರ ಸೂಚಿಸುವುದಿಲ್ಲ. ಜ್ಞಾನಿ, ತಿಳುವಳಿಕೆ ಉಳ್ಳವನು ಎಂಬ ಅರ್ಥವನ್ನೂ ಸೂಚಿಸುತ್ತದೆ. ಉರ್ದುವಿನಿಂದ ಆಟಗಾರ ಎಂಬ ಅರ್ಥದಲ್ಲಿ ಇದ್ದ 'ಖಿಲಾಡಿ' ಎಂಬ ಶಬ್ದವು ಕನ್ನಡದಲ್ಲಿ ಕಿಲಾಡಿ ಎಂದಾಗಿದ್ದು, ಉಪಾಯಗಾರ ಎಂಬರ್ಥದಲ್ಲಿ ಬಳಕೆಯಾಗುತ್ತಿದೆ.

ಇಂಗ್ಲೀಷಿನಲ್ಲಿ ಉಪಾಯಕ್ಕೆ Trick ಎಂಬ ಶಬ್ದವಿದೆ. ಈ ಶಬ್ದದಿಂದ Trickstar ಎಂಬ ಶಬ್ದವು ಹುಟ್ಟಿದ್ದು, ಅದು ಉಪಾಯಗಾರ ಎಂಬುದಕ್ಕೆ ಸಂವಾದಿಯಾಗಿದೆ. ಉತ್ತರ ಕರ್ನಾಟಕದಲ್ಲಿ ತುಂಬಾ ಜಾಣ್ಮೆ ತೋರುವವರನ್ನು 'ಬೆರಕಿ' ಎಂದು ಕರೆಯುವುದುಂಟು. ಆದರೆ ಇದು ಉಪಾಯಗಾರ ಎಂಬರ್ಥದಲ್ಲಿ ಬಳಕೆಯಾಗುವುದಿಲ್ಲ. ಉಪಾಯವೆಂಬ ಶಬ್ದವು ಯುದ್ಧ ಸಂಸ್ಕೃತಿಯಲ್ಲಿ ವೈರಿಗಳನ್ನು ಸೋಲಿಸಲು ಉಪಯೋಗಿಸುವ ತಂತ್ರಗಾರಿಕೆ ಎಂಬರ್ಥದಲ್ಲಿ ಬಳಕೆಯಾಗುವುದುಂಟು. ಯುದ್ಧಸಂಸ್ಕೃತಿಯಲ್ಲಿ ನಾಲ್ಕು ಉಪಾಯಗಳು ಪ್ರಸಿದ್ಧವಾಗಿವೆ. ಅವೆಂದರೆ

ಸಾಮ, ದಾನ, ಭೇದ ಹಾಗೂ ದಂಡ. ಇದನ್ನು ಗಮನಿಸಿದರೆ ಉಪಾಯ ಎಂಬುದಕ್ಕೆ ಬುದ್ಧಿವಂತಿಕೆ ಜಾಣತನ ಎಂಬರ್ಥಗಳು ಇರುವ ಹಾಗೆಯೇ ಮೋಸ, ವಂಚನೆ, ಕುಟಿಲತೆ, ಇತ್ಯಾದಿ ಅರ್ಥಗಳು ಇವೆಯೆಂದು ತಿಳಿಯುವುದು.

ಈ ಹಿನ್ನೆಲೆಯಲ್ಲಿ ಉಪಾಯಕ್ಕೆ ಎರಡು ಆಯಾಮಗಳಿವೆ. ೧. ಸಂಕಟ ಮತ್ತು ಇಕ್ಕಟ್ಟಿನಲ್ಲಿ ಸಿಲುಕಿರುವವರು, ಅದರಿಂದ ಪಾರಾಗಿ ಹೊರ ಬರಲು ತೋರಿಸುವ ಜಾಣ್ಮೆಯ ಆಯಾಮ. ೨. ದಡ್ಡರನ್ನು ಹಾಗೂ ಮುಗ್ಧರನ್ನು ವಂಚಿಸುವುದಕ್ಕೆ ಕುತಂತ್ರಿಗಳು ವಂಚಕರು ಮಾಡುವ ತಂತ್ರಗಾರಿಕೆಯ ಆಯಾಮ. ಮೊದಲನೆಯದು ಬಲಿಯಾಗುವುದರಿಂದ ಬಲಿಪಶು ತನ್ನನ್ನು ತಾನು ರಕ್ಷಿಸಿಕೊಳ್ಳುವ ಯುಕ್ತಿಯಾಗಿದ್ದರೆ, ಎರಡನೆಯದು ಒಬ್ಬರು ಮತ್ತೊಬ್ಬರನ್ನು ಬಲಿ ತೆಗೆದುಕೊಳ್ಳುವುದಕ್ಕೆ ಬಲಿಷ್ಠರು ಬಳಸುವ ಹುನ್ನಾರವಾಗಿದೆ.

ಈ ಎರಡೂ ಆಯಾಮಗಳನ್ನು ಪ್ರಾಣಿ, ಪಕ್ಷಿ, ಕೀಟಗಳ, ಜಗತ್ತಿನಲ್ಲಿ ಸ್ಪಷ್ಟವಾಗಿ ನೋಡಬಹುದು. ಮೊಲವನ್ನು ತಿನ್ನಲು ಸಿಂಹವು ಉಪಾಯಗಾರಿಕೆ ಮಾಡುವಂತೆಯೇ ಸಿಂಹದಿಂದ ಬದುಕಿ ಉಳಿಯಲು ಮೊಲವೂ ಉಪಾಯಗಾರಿಕೆ ಮಾಡುತ್ತದೆ. ಈ ರಕ್ಷಣಾತ್ಮಕ ಮತ್ತು ಆಕ್ರಮಣಾತ್ಮಕ ಎರಡು ಆಯಾಮಗಳನ್ನು ಮನುಷ್ಯ ಸಮಾಜದಲ್ಲಿ ಕಾಣಬಹುದು. ದುರ್ಬಲ ಮನುಷ್ಯರನ್ನು ಮಣಿಸಲು ಬಲಿಷ್ಠರಾದವರು ಅನೇಕ ತಂತ್ರಗಳನ್ನು ಹುಡುಕುತ್ತಾರೆ. ಹಾಗೆಯೇ ಅವರ ಹೊಡೆತ ಮತ್ತು ಶೋಷಣೆಗಳಿಂದ ಪಾರಾಗಲು ದುರ್ಬಲರು ತಮ್ಮದೆ ಆದ ಉಪಾಯಗಾರಿಕೆಗಳನ್ನು ಹುಡುಕಿಕೊಳ್ಳುತ್ತಾರೆ. ಪರಸ್ಪರ ವಿರುದ್ಧ ಹಿತಾಸಕ್ತಿಗಳಿಂದ ಕೂಡಿರುವ ಈ ಎರಡು ಆಯಾಮಗಳು ಒಟ್ಟಿಗೆ ಇರುವುದರಿಂದಲೇ ಸಂಘರ್ಷಮಯವಾದ ಚಲನಶೀಲವಾದ ಸನ್ನಿವೇಶವು ಸಮಾಜದಲ್ಲಿದೆ. ಈ ಸನ್ನಿವೇಶವನ್ನು ಜನಪದ ಕಥೆಗಳು ಅದ್ಭುತವಾಗಿ ಕಂಡರಿಸುತ್ತವೆ.[೩]

## ಟಿಪ್ಪಣಿಗಳು

೦೧. ಕನ್ನಡ ನಿಘಂಟು - ಸಂ-೧, ಪು. ೯೫೨

೦೨. ಕನ್ನಡ ಪದನಿಧಿ, ಪು.೩೮೫-೩೮೬

೦೩. 'ಹೈದ್ರಾಬಾದ ಕರ್ನಾಟಕದ ಜನಪದ ಕಥೆಗಳು: ಒಂದು ಚಿಂತನೆ' ಎಂಬ ಲೇಖನದಲ್ಲಿ ವೀರಣ್ಣ ದಂಡೆಯವರು, ಈ ಭಾಗದ ಕಥೆಗಳನ್ನು ವಿಶ್ಲೇಷಣೆ ಮಾಡುತ್ತ, ಅವುಗಳ ಆಶಯಗಳನ್ನು ಪ್ರಾಣಿಕಥೆಗಳು, ಪಕ್ಷಿಕಥೆಗಳು, ಷ್ಮಾಂತ್ರಿಕ ಕಥೆಗಳು, ಅದ್ಭುತ ಎದುರಾಳಿಗಳು, ಮಾಟದ ಕಥೆಗಳು, ಅಸಾಮಾನ್ಯ ಸಹಾಯಕರು, ಸಹಾಯಕ ಪ್ರಾಣಿಗಳು, ಅಸಾಮಾನ್ಯ ಸಾಮರ್ಥ್ಯ ಅಥವಾ ಜ್ಞಾನ, ಹೊರದೂಡಲ್ಪಟ್ಟ ಹೆಂಡತಿ ಮತ್ತು ಕನ್ಯೆ, ಸತ್ಯವು ಬೆಳಕಿಗೆ ಬರುವುದು, ಸಾಹಸ ಕಥೆಗಳು, ದಡ್ಡರು ಮತ್ತು ಮೂರ್ಖರು, ಸ್ವಾಮಿಭಕ್ತಿ, ಜಾಣತನದ ನಟನೆ ಮತ್ತು ಮಾತು, ಜಾಣಮನುಷ್ಯ, ಮುಂತಾಗಿ ವಿಭಜನೆ ಮಾಡುವರು. ಇವುಗಳಲ್ಲಿ ಉಪಾಯಗಾರಿಕೆಗೆ ಸಂಬಂಧಿಸಿದ ಆಶಯಗಳೆಂದರೆ, ಜಾಣತನದ ನಟನೆ, ಜಾಣಮನುಷ್ಯ, ಅಸಾಮಾನ್ಯ ಸಾಮರ್ಥ್ಯ ಅಥವಾ ಜ್ಞಾನ. ದೇಸಿ, ಪು. ೨೯೮-೩೦೬

# ಅಧ್ಯಾಯ-೨

# ಬಡವರ ಉಪಾಯಗಾರಿಕೆಯ ಸ್ವರೂಪ

ಭಾರತ ದೇಶದಲ್ಲಿ ಬಡತನವು ಬಹಳ ದೊಡ್ಡ ಪ್ರಮಾಣದಲ್ಲಿದೆ. ಜನರ ಹಸಿವಿಗೂ ಅಪಮಾನಕ್ಕೂ ಸಂಬಂಧಿಸಿರುವ ಈ ಬಡತನವು ಒಂದು ಶಾಪವಾಗಿದೆ. ಈ ಬಡತನಕ್ಕೆ ಕಾರಣಗಳು ಹಲವಾರಿವೆ. ನಮ್ಮ ಸಮಾಜದ ಮೇಲು ಜಾತಿಗಳಿಗೆ ಹೋಲಿಸಿದರೆ, ಕೆಳಜಾತಿಯ ಜನರಲ್ಲಿ ಬಡತನ ಹೆಚ್ಚಾಗಿದೆ. ಅಂದರೆ ಜಾತಿಗೂ ಬಡತನಕ್ಕೂ ಸಂಬಂಧವಿದೆ. ಸಂಪತ್ತಿನ ಸಮಾನ ವಿತರಣೆ ಆಗದಿರುವ ಎಲ್ಲ ಸಮಾಜಗಳಲ್ಲಿ ಬಡತನ ಸಿರಿವಂತಿಕೆಗಳ ತಾರತಮ್ಯವು ಇರುತ್ತದೆ. ಚರಿತ್ರೆಯನ್ನು ನೋಡಿದರೆ, ಕೆಳಜಾತಿ ಮತ್ತು ಕೆಳವರ್ಗದವರಿಗೆ ಸಂಪತ್ತಿನ ಮೇಲೆ ಹಿಡಿತ ಇರಲಿಲ್ಲ. ಹೆಚ್ಚಿನವರಿಗೆ ಉಳುವುದಕ್ಕೆ ಜಮೀನು ಇರಲಿಲ್ಲ. ಗ್ರಾಮೀಣ ಪ್ರದೇಶಗಳಲ್ಲಿ ಬಡವರು ಜಮೀನ್ದಾರರಲ್ಲಿ ತಮ್ಮ ಉಪಜೀವನಕ್ಕಾಗಿ ಕೂಲಿ ಮಾಡಿ ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದರು. ಭಾರತೀಯ ಸಮಾಜದಲ್ಲಿ ಕೆಳವರ್ಗದ, ಜನತೆಯನ್ನು ಆಸ್ತಿಯಿಂದ ಮಾತ್ರವಲ್ಲ, ಶಿಕ್ಷಣದಿಂದಲೂ ವಂಚಿತರನ್ನಾಗಿ ಮಾಡಲಾಯಿತು. ಅವರಿಗೆ ಘನತೆಯ ಬದುಕನ್ನು ಬದುಕಲು ಕಷ್ಟವಾಗುವಂತೆ ಇಕ್ಕಟ್ಟುಗಳನ್ನು ನಿರ್ಮಿಸಲಾಯಿತು. "ಬಡವರು ಸತ್ತಾರೆ ಸುಡಲಿಕೆ ಸೌದಿಲ್ಲ, ಒಡಲ ಬೆಂಕಿಗೆ ಹೆಣಬೆಂದೊ ಶಿವನೆ, ಬಡವರಿಗೆ ಸಾವಕೊಡಬೇಡ" ಎಂದು ಯಾರೊ ಗ್ರಾಮೀಣ ಪ್ರದೇಶದ ಬಡವರು ವೇದನೆಯಿಂದ ಹಾಡಿದ್ದಾರೆ. ಜನಪದ ಗಾದೆಯೊಂದು 'ಬಡವರ ಕೋಪ ದವಡೆಗೆ ಮೂಲ' ಎಂದು ಹೇಳುತ್ತದೆ. ಉಳ್ಳವರು ಕೊಡುವ ಕಷ್ಟಕೋಟಲೆಗಳನ್ನು ಸಹಿಸಿಕೊಂಡು ಬದುಕಬೇಕು ಎಂಬ ಸಂದೇಶ ಇದರಲ್ಲಿದೆ. ಪ್ರತಿಭಟಿಸಿದರೆ ಹೊಡೆತ ನಾಶ ಸಾವು ಎಂಬರ್ಥಗಳೂ 'ಇಲ್ಲಿವೆ.

ಚರಿತ್ರೆಯ ಈ ಸನ್ನಿವೇಶವು ಈಗಲೂ ಬಹಳ ಬದಲಾಗಿಲ್ಲ. ಅವರು ಒಡೆಯರು ಕೊಡುವ ಕಷ್ಟ ಅಪಮಾನಗಳನ್ನು ಸಹಿಸುತ್ತ ಬಂದಿರುವರು. ಆದರೆ ನಾನಾ ಉಪಾಯದಿಂದ ಆ ಕಷ್ಟಕೋಟಲೆಗಳಿಂದ ಪಾರಾಗುತ್ತಲೂ ಅವರು ಬಂದಿರುವರು. ಈ ಪಾರಾಗುವ ಉಪಾಯಗಳು

ಅವರ ಸಾಹಿತ್ಯದ ಅಭಿವ್ಯಕ್ತಿಯಲ್ಲಿ ಪ್ರಕಟವಾಗುತ್ತ ಬಂದಿವೆ. ದೈಹಿಕ ದುಡಿಮೆಯ ಬಡಜನರು ತಮ್ಮ ಬದುಕಿನ ನೋವುಗಳನ್ನು ಮರೆಯುವುದಕ್ಕಾಗಿ ಸಂಜೆಯ ಹೊತ್ತಿನಲ್ಲಿ ಅಥವಾ ಕೆಲಸದ ವೇಳೆಯಲ್ಲಿ ತಮ್ಮ ಅನುಭವಗಳನ್ನು ಹಂಚಿಕೊಳ್ಳುವಂತೆ ಕಥೆಗಳನ್ನು ಹೇಳುವ ಮತ್ತು ಕೇಳುವ ಕೆಲಸ ಮಾಡುತ್ತಾರೆ. ಅವರ ಈ ಕಥೆಗಳು ವಾಸ್ತವ ಘಟನೆಗಳ ಆಧಾರದಲ್ಲಿ ಹುಟ್ಟಿದ್ದರೂ ಅವುಗಳಲ್ಲಿ ಬೇಕಾದಷ್ಟು ಕಲ್ಪನೆಯ ಅಂಶವಿದೆ. ತಮ್ಮ ಕಥೆಗಳಲ್ಲಿ ಅವರು ತಮ್ಮ ಒಡೆಯರನ್ನು ಸೋಲಿಸುವ ಕಲ್ಪನೆಯನ್ನು ತರುವರು. ತಮ್ಮ ಬಡತನವು ಹೋಗಿ ಶ್ರೀಮಂತರಾಗುವ ಕನಸನ್ನು ಹೆಣೆಯುವರು. ಹೀಗೆ ಜನಪದ ಕಥೆಗಳು ಅವರ ಸೃಜನಶೀಲ ಅಭಿವ್ಯಕ್ತಿ ಮಾತ್ರವಲ್ಲ, ಅವರ ನಿತ್ಯಬದುಕಿನಲ್ಲಿ ವಾಸ್ತವವನ್ನು ಮುಖಾಮುಖಿ ಮಾಡುವ ಭಾಗವಾಗಿಯೂ ಇವೆ. ಬಡತನವು ಶಾಪವಾಗಿದ್ದರೂ ಅದರಿಂದ ಬರುವ ಕೀಳರಿಮೆಯನ್ನು ಮೀರುವುದು ಬಡವರಿಗೆ ಇದರಿಂದ ಸಾಧ್ಯವಾಗಿದೆ. ಕಥೆಗಾರಿಕೆ ಹಾಡುವಿಕೆ ಕುಣಿತ ಮುಂತಾದ ಕಲಾಭಿವ್ಯಕ್ತಿಗಳು ಅವರನ್ನು ಹತಾಶರಾಗದಂತೆ ಉಳಿಸಿವೆ.

ಈ ಬಡವರ ಕಷ್ಟದ ಬದುಕು, ಉಳ್ಳವರ ದಮನ, ಬಡವರು ಪ್ರತಿಯಾಗಿ ಮಾಡುವ ಪ್ರತಿಭಟನೆ, ಉಪಾಯಗಾರಿಕೆ ಇವೆಲ್ಲವೂ ಕಲಾಭಿವ್ಯಕ್ತಿಯಾಗಿ ಕನ್ನಡ ಸಾಹಿತ್ಯದಲ್ಲಿ ಅನೇಕ ಕೃತಿಗಳಲ್ಲಿ ಕಾಣಿಸಿಕೊಂಡಿದೆ. ಚೋಮನ ದುಡಿ' ಕಾದಂಬರಿ ಚೋಮನ ವ್ಯಥೆ ಮತ್ತು ಕಲೆಗಾರಿಕೆಗಳನ್ನು ಇಲ್ಲಿ ನೆನೆಯಬಹುದು. ದೇವನೂರ ಮಹಾದೇವ ಅವರ 'ಒಡಲಾಳ' ಕಾದಂಬರಿಯಲ್ಲಿ ಸಾಕವ್ವ ಎಂಬ ಬಡ ಮತ್ತು ದಲಿತವರ್ಗದ ಮುದುಕಿಯು ತನ್ನ ಹುಂಜವು ಕಳೆದುಹೋಗಿದ್ದನ್ನು ಪೋಲಿಸರಿಗೆ ತಿಳಿಸುತ್ತಾಳೆ. ಆಗ ಪೋಲಿಸರು 'ನಿನ್ನ ಹುಂಜ ಹೇಗಿತ್ತು ಎಂದು ಕೇಳಿದಾಗ ಅದರ ಜತೆಯ ಇನ್ನೊಂದು ಹುಂಜವನ್ನು ತೋರಿಸಿ ಈ ರೀತಿಯಿತ್ತು ಎಂದು ಹೇಳುತ್ತಾಳೆ. ಆಗ ಪೋಲಿಸರು ಸರಿ ನಾವು ಈ ಹುಂಜವನ್ನು ಕಳಿಸಿ ಆ ಹುಂಜವನ್ನು ಹುಡುಕಿಕೊಡುತ್ತೇವೆ ಎಂದು ಉಪಾಯ ಮಾಡಿ ಮುಗ್ಧಳಾದ ಸಾಕವ್ವಳನ್ನು ವಂಚಿಸುತ್ತಾರೆ. ಇದು ಬಡವರ ವಿರುದ್ಧ ಉಳ್ಳವರು ಮಾಡುವ ಉಪಾಯಗಾರಿಕೆಯಾಗಿದೆ. ಆದರೆ ಇದೇ ಕಾದಂಬರಿಯಲ್ಲಿ ಶೇಂಗಾಕಾಯಿಯನ್ನು ಕದ್ದು ತಂದು ತಿಂದು ಸಾಕ್ಷಿಗೆ ಅದರ ಸಿಪ್ಪೆಯೂ ಇಲ್ಲದಂತೆ ಸುಟ್ಟುಹಾಕುವ ಸಾಕವ್ವನ ಕುಟುಂಬದ ಸದಸ್ಯರ ಕೆಲಸವು ಬಡವರ ಉಪಾಯಗಾರಿಕೆಯಾಗಿದೆ. ಹೀಗೆ ಕನ್ನಡ ಕಥೆ ಕಾದಂಬರಿಗಳಲ್ಲಿ ಜನಪದ ಕಥೆಗಳಲ್ಲಿ ಇರುವಂತೆಯೇ ಉಪಾಯಗಾರ ನಾಯಕ ನಾಯಕಿಯರು ಬರುವುದನ್ನು ಗಮನಿಸಬಹುದು.

ಈಗ ಕೆಲವು ಜನಪದ ಕಥೆಗಳನ್ನು ಇಟ್ಟುಕೊಂಡು ಅಲ್ಲಿ ಬರುವ ಉಪಾಯಗಾರ ನಾಯಕರ ಚಿತ್ರಣವನ್ನು ನೋಡಬಹುದು.

'ಮಾತಿನ ಮಲ್ಲಣ್ಣ ಸಾಹುಕಾರ ಶೇಷಪ್ಪ' ಎಂಬ ಜನಪದ ಕಥೆಯಲ್ಲಿ ಒಬ್ಬ ಬಡವನ ಹೆಂಡತಿಯನ್ನು ಊರ ಧಣಿಯು ಬಯಸಿ ಆಕೆಯನ್ನು ಪಡೆದುಕೊಳ್ಳುವುದಕ್ಕೆ ಮಾಡುವ ಯತ್ನವಿದೆ. ಆದರೆ ಬಡವರು ಉಪಾಯವಾಗಿ ಆ ಯತ್ನದಿಂದ ಪಾರಾಗುವರು. ಇದೊಂದು

ಬಗೆಯಲ್ಲಿ ಬಡವ ಶ್ರೀಮಂತರ ನಡುವೆ ನಡೆಯುವ ವರ್ಗಸಂಘರ್ಷದ ಕಥೆಯಾಗಿದೆ. ಈ ವರ್ಗ ಸಂಘರ್ಷದಲ್ಲಿ ಸಾಮಾಜಿಕವಾಗಿ ಆರ್ಥಿಕವಾಗಿ ತುಳಿತಕ್ಕೆ ಒಳಪಟ್ಟ, ದನಿ ಕಳೆದುಕೊಂಡ, ನೋವುಂಡ ಬಡವರ ಬದುಕಿನ ಎದೆಯಾಳದ ಸಂಕಟಗಳ ಪಾಡಿದೆ. ಶ್ರೀಮಂತರಾದವರು ಬಡಕುಟುಂಬದ ಹೆಣ್ಣುಮಕ್ಕಳನ್ನು ಬಳಸಿ ತಮ್ಮ ಕಾಮತೃಷೆ ತೀರಿಸಿಕೊಳ್ಳುವುದಕ್ಕೆ ಯತ್ನಿಸುವ ಕೆಲಸಕ್ಕೆ ತಮ್ಮ ಕೆಲಸಗಾರರಾದ ಬಡವರನ್ನೇ ನೇಮಿಸಿಕೊಳ್ಳುತ್ತಾರೆ. ಇದು ಬಡವರಿಂದಲೇ ಶೋಷಣೆ ಮಾಡಿಸುವಂತಹ ವಿಚಿತ್ರ ಪ್ರಸಂಗವನ್ನು ಮೇಲ್ವರ್ಗಗಳು ಸೃಷ್ಟಿಸುವುದನ್ನು ಸೂಚಿಸುತ್ತದೆ. ಬಡವರ ಶ್ರೀಮಂತರ ಪರಸ್ಪರ ಸಂಬಂಧದಲ್ಲಿ ಹಗೆತನ ಅಸೂಯೆಗಳು ತಾಂಡವವಾಡುತ್ತವೆ. ಇದರ ನಡುವೆ ಮಹಿಳೆಯರು ನಲುಗುತ್ತಾರೆ.

ನಮ್ಮ ಸಮಾಜದಲ್ಲಿ ಸಿರಿವಂತರ ಮುಂದೆ ಬಡವರು ಎಲ್ಲ ಬಗೆಯಲ್ಲಿ ಅಸಹಾಯಕರಾಗಿರುತ್ತಾರೆ. ಅವರ ಮಹಿಳೆಯರು ಸುಂದರಿಯರಾಗಿದ್ದರೆ, ಅವರನ್ನು ಮೋಹಿಸುವುದಕ್ಕೆ ನಾನಾ ತಂತ್ರಗಳನ್ನು ಮಾಡುತ್ತಾರೆ. ಕೆಲವೊಮ್ಮೆ ಮೇಲುಜಾತಿಯ ಜನರು ಕೆಳಜಾತಿಯ ಮಹಿಳೆಯರನ್ನು ತಮ್ಮ ಆಸೆ ಆಕಾಂಕ್ಷೆಗಳನ್ನು ಈಡೇರಿಸಿಕೊಳ್ಳುವುದಕ್ಕೆ ಪ್ರಚೋದಿಸುತ್ತಿರುತ್ತಾರೆ. ಆಗ ಬಡವರಿಗೆ ಮತ್ತು ಕೆಳಜಾತಿಯವರಿಗೆ ತಮ್ಮ ಕಷ್ಟದಿಂದ ಪಾರಾಗಲು ಅನೇಕ ತಂತ್ರಗಳು ಹೊಳೆಯುತ್ತವೆ. ಉಳ್ಳವರು ಮತ್ತು ಸವರ್ಣೀಯರು ಕೊಡುವ ಕಷ್ಟಗಳಿಂದ ತಪ್ಪಿಸಿಕೊಳ್ಳುವುದಕ್ಕೆ ಮಹಿಳೆಯರು ಸಹ ಹಲವಾರು ಉಪಾಯವನ್ನು ಮಾಡುತ್ತಾರೆ. ಕಾಮುಕ ವ್ಯಕ್ತಿಗಳಿಂದ ತಮ್ಮ ಶೀಲವನ್ನು ರಕ್ಷಿಸಿಕೊಳ್ಳುವ ಚತುರ ಮಹಿಳೆಯರು ಜನಪದ ಕಥೆಗಳಲ್ಲಿ ಬಹಳ ಬರುತ್ತಾರೆ. ಬಲಿಷ್ಠರು ಕೊಡುವ ಕಿರುಕುಳವನ್ನು ಸಹಿಸಿಕೊಂಡು ಧೃತಿಗೆಡದೆ ತಮ್ಮ ಎದೆಗಾರಿಕೆಯ ಮೂಲಕ ಮಹಿಳೆಯರು ತಮ್ಮ ಕುಟುಂಬದ ಗಂಡಸರ ಜತೆ ಸೇರಿ ಎದುರಿಸುತ್ತಾರೆ. ಅಂತಿಮವಾಗಿ ಅಪಾಯದಿಂದ ತಪ್ಪಿಸಿಕೊಳ್ಳುತ್ತಾರೆ. ಮಾತಿನ ಮಲ್ಲಣ್ಣ ಕಥೆಯಲ್ಲಿ ಹೀಗೇ ಆಗುತ್ತದೆ. ಇಲ್ಲಿನ ವಿಶಿಷ್ಟತೆಯೆಂದರೆ, ಬಡವರು ತಮ್ಮನ್ನು ಉಳಿಸಿಕೊಳ್ಳುವ ಹೋರಾಟದಲ್ಲಿ ಏಕಾಂಗಿಗಳಲ್ಲ. ಅವರಿಗೆ ಜತೆಯಾಗಿ ಅವರ ಸುತ್ತಮುತ್ತಲಿನ ಜನರು ನಿಲ್ಲುತ್ತಾರೆ. ಎಲ್ಲರೂ ಸೇರಿ ಸಿರಿವಂತರು ಕೊಡುವ ಕಷ್ಟಗಳಿಗೆ ತಮ್ಮ ಪ್ರತಿ ಉಪಾಯಗಳ ಮೂಲಕ ಗೆಲ್ಲುತ್ತಾರೆ. ಬಡವರ ಈ ನೋವುಗಳನ್ನು ಮತ್ತು ಹೋರಾಟವನ್ನು ಜನಪದ ಕಥೆಗಳ ಮೂಲಕ ಜನಪದರು ಸಮರ್ಥವಾಗಿ ಬಿಂಬಿಸಿದ್ದಾರೆ.

ಭಾರತೀಯ ಆರ್ಥಿಕ ಸಾಮಾಜಿಕ ವ್ಯವಸ್ಥೆಯಲ್ಲಿ ಶ್ರಮಿಕರನ್ನು ನಾನಾ ಕಷ್ಟಕ್ಕೆ ಈಡುಮಾಡಲಾಗಿದೆ. ಬಹುಸಂಖ್ಯಾತರ ಶ್ರಮದ ಪ್ರತಿಫಲವನ್ನು ಕೆಲವೆ ಮಂದಿ ಅನುಭವಿಸುತ್ತಿರುವುದು ಸಾಮಾಜಿಕ ಆರ್ಥಿಕ ಶೋಷಣೆಯನ್ನು ಸೂಚಿಸುತ್ತದೆ. ಇದು ಉಳ್ಳವರು ಮತ್ತು ಇಲ್ಲದವರ ನಡುವಿನ ಸಂಘರ್ಷಕ್ಕೆ ಕಾರಣವಾಗುತ್ತದೆ. ಆದರೆ ಸಂಘರ್ಷ ಸಾಧ್ಯವಿಲ್ಲದ ಸನ್ನಿವೇಶದಲ್ಲಿ ಈ ಯುದ್ಧವು ಬಡವರ ನಾಶದಲ್ಲಿ ಮುಗಿಯುತ್ತದೆ. ಇಲ್ಲವೇ ಅವರ

ಜಾಣತನದಿಂದ ಅವರು ಬದುಕುಳಿಯುವುದರ ಮೂಲಕ ಮುಗಿಯುತ್ತದೆ. ಜನಪದ ಕಥೆಗಳಲ್ಲಿ ಈ ಎರಡನೆಯ ಸಾಧ್ಯತೆಯೇ ಹೆಚ್ಚಾಗಿ ಕಾಣಬರುತ್ತದೆ.

ಬಡತನ ಮತ್ತು ಹಸಿವು ಶ್ರಮಿಕರನ್ನು ಶತಮಾನಗಳಿಂದ ಕಾಡುತ್ತಿರುವ ಸಮಸ್ಯೆಯಾಗಿದೆ. ಈ ಬಡತನ ಮತ್ತು ಹಸಿವುಗಳು ಕೆಳವರ್ಗದವರ ಚೈತನ್ಯಗಳನ್ನು ನುಚ್ಚುನೂರಾಗಿಸಿವೆ. ಶೋಷಕರ ದಬ್ಬಾಳಿಕೆಯನ್ನು ಪ್ರತಿಭಟಿಸಲಾಗದಷ್ಟು ಪ್ರಶ್ನಿಸಲಾರದಷ್ಟು ನಿಸ್ತೇಜರನ್ನಾಗಿಸಿವೆ. ಉಳ್ಳವರು ಇವರ ಬಡತನವನ್ನು ಬಂಡವಾಳವನ್ನು ಮಾಡಿಕೊಂಡು ನಿರಂತರವಾಗಿ ಶೋಷಣೆ ಮಾಡುವರು. ಶತಮಾನಗಳಿಂದ ಇಲ್ಲಿನ ಭಾರತದ ಸಾಮಾಜಿಕ ವ್ಯವಸ್ಥೆಯು ಬಡವರನ್ನ ದಯನೀಯ ಸ್ಥಿತಿಗೆ ದೂಡಿದೆ. ಬಡವರ ಮನಸ್ಸನ್ನು ಆಲೋಚನೆಗಳನ್ನು ಭಗ್ನಗೊಳಿಸುವ ಕಾರಣಕ್ಕಾಗಿಯೇ ಬಡತನವನ್ನು ಅಸ್ತ್ರವನ್ನಾಗಿ ಬಳಸಿಕೊಂಡು ಶೋಷಿಸಲಾಗುತ್ತದೆ. 'ಮಾತಿನ ಮಲ್ಲಣ್ಣ' ಕಥೆಯಲ್ಲಿ ಸಾಹುಕಾರನ ಹೆಂಡತಿಯನ್ನು ಬಯಸುವ ಶ್ರೀಮಂತನು ತನ್ನ ಸಹಾಯಕನ ಮೂಲಕ ಸಂದೇಶ ಕಳಿಸುತ್ತಾನೆ. ಆದರೆ ಅವಳು ಅವನನ್ನು ಕುಳ್ಳಿರಿಸಿ ಮರ್ಯಾದೆಯನ್ನು ನೀಡಿ ದಿಟ್ಟವಾಗಿ ಎದುರುತ್ತರವನ್ನು ನೀಡುತ್ತಾಳೆ. ಶ್ರೀಮಂತನು ಅವಳನ್ನು ಪಡೆಯುವುದಕ್ಕೆ ಒಂದು ಉಪಾಯವನ್ನು ಮಾಡಿ ಕುತಂತ್ರದ ಪಂಥವನ್ನು ಅವಳ ಗಂಡನು ತನ್ನ ಜತೆ ಕಟ್ಟುವಂತೆ ಮಾಡುತ್ತಾನೆ. ಶ್ರೀಮಂತ ಗೆದ್ದರೆ ಅವನು ಮುಟ್ಟಿದ ವಸ್ತುವನ್ನು ಸೋತ ಬಡವನು ಕೊಡಬೇಕು ಎಂಬುದೇ ಆ ಪಂಥವಾಗಿರುತ್ತದೆ. ಇದು ದುರ್ಯೋಧನ ಮತ್ತು ಶಕುನಿಯರು ದ್ರೌಪದಿಯನ್ನು ಪಣಕ್ಕೊಡ್ಡುವಂತೆ ಮಾಡಿ ಧರ್ಮರಾಯನನ್ನು ಸೋಲಿಸುವ ಮಹಾಭಾರತದ ಕಥೆಯನ್ನು ಹೋಲುವುದು ಗಮನಾರ್ಹವಾಗಿದೆ. ಕಥೆಯಲ್ಲಿ ಸಿರಿವಂತ ಹೂಡಿದ ಕುತಂತ್ರದಲ್ಲಿ ಬಡವನು ಶೋಚನೀಯವಾಗಿ ಸೋಲುತ್ತಾನೆ.

ಆದರೆ ಕಥೆ ಇಲ್ಲಿಗೆ ಮುಗಿಯುವುದಿಲ್ಲ. ಬಡವರು ಮತ್ತು ಅವನ ಕುಟುಂಬದ ಮಹಿಳೆಯರು ತಮ್ಮ ಮಾನವನ್ನು ರಕ್ಷಿಸಿಕೊಳ್ಳಲು ಅನೇಕ ಉಪಾಯಗಳನ್ನು ಮಾಡುತ್ತಾರೆ. ಬಡವನು ಮಾಡಿದ ನೆರವನ್ನು ತೀರಿಸಲು ಅವನ ಗೆಳೆಯನು ಅವನಿಗೆ ಒಂದು ಉಪಾಯವನ್ನು ಹೇಳಿಕೊಡುತ್ತಾನೆ. ಅದರ ಪ್ರಕಾರ, ತನ್ನ ಗೆಳೆಯನ ಹೆಂಡತಿಯನ್ನು ಪಂಥಕ್ಕೆ ತಕ್ಕಂತೆ, ಮಾಳಿಗೆಯ ಮೇಲೆ ಕೂರಿಸಲಾಗುತ್ತದೆ. ಅವಳನ್ನು ಮುಟ್ಟುವುದಕ್ಕೆ ಸಿರಿವಂತನು ಏಣಿಯನ್ನು ಮುಟ್ಟಿ ಹತ್ತಲು ಹೋಗುತ್ತಾನೆ. ಪಂಥದ ಪ್ರಕಾರ ಅವನು ಮನೆಗೆ ಬಂದು ಮುಟ್ಟಿದ ಮೊದಲ ವಸ್ತು ಏಣಿಯಾಗಿರುತ್ತದೆ. ಆದ್ದರಿಂದ ಅದನ್ನು ತೆಗೆದುಕೊಂಡುಹೋಗು ಎಂದು ಬಡವನು ಹೇಳುತ್ತಾನೆ. ಈ ರೀತಿಯಲ್ಲಿ ಉಪಾಯವನ್ನು ಮಾಡಿ ಅವನು ತನ್ನ ಮಡದಿಯ ಮಾನವನ್ನು ರಕ್ಷಿಸುತ್ತಾನೆ. ಜನಪದ ಕಥೆಗಳಲ್ಲಿ ಬಡವರು ಒಬ್ಬರಿಗೊಬ್ಬರು ಸಹಾಯ ಮಾಡುವುದು ಗಮನಾರ್ಹ. ಇದು ತಮಗೆ ಕಷ್ಟಬಂದಾಗ ಪಾರಾಗುವುದಕ್ಕೆ ಬಡಪಾಯಿ ಹಕ್ಕಿಗಳು ಒಟ್ಟಿಗೆ ಬಲೆಯನ್ನು ಎತ್ತಿಕೊಂಡು ಹಾರಿ ಒಗ್ಗಟ್ಟು ತೋರಿಸುವ ಪ್ರಸಂಗವನ್ನು ನೆನಪಿಸುತ್ತದೆ. ಸಿರಿವಂತರು ತಮ್ಮ ನೆರವಿಗೆ ಬಡವರನ್ನು ಬಳಸುವರು. ಬಡವರನ್ನು ಬಡವರಿಂದಲೇ

ಶೋಷಣೆ ಮಾಡುವ ದುರಂತಕ್ಕೆ ಪ್ರತಿಯಾಗಿ, ಬಡವರು ಬಡವರಿಗೆ ಒಬ್ಬರಿಗೊಬ್ಬರು ನೆರವಾಗುವರು. ಈ ಎರಡೂ ಮುಖಗಳು ಜನಪದ ಕಥೆಗಳಲ್ಲಿ ಇವೆ.

ಶ್ರೀಮಂತಿಕೆ ಬಟ್ಟೆ ಬರೆಯಲ್ಲಿರುವಂತಹದಲ್ಲ; ದೊಡ್ಡಮನೆ ಕಟ್ಟುವುದರಲ್ಲಿಯೂ ಇರುವುದಿಲ್ಲ. ಅದು ಆಸ್ತಿಯಲ್ಲಿ ಇರುವುದಿಲ್ಲ. ಅದು ಹೃದಯವಂತಿಕೆಯಲ್ಲಿ ಇರುತ್ತದೆ. ಅಂತಹ ಹೃದಯವಂತಿಕೆಯನ್ನು ಬಡವರು ತೋರುವುದು ಈ ಕಥೆಯಲ್ಲಿ ಕಾಣಬರುತ್ತದೆ. ಈ ಉಪಾಯಗಾರಿಕೆಯು ಗ್ರಾಮೀಣ ಪ್ರದೇಶದಲ್ಲಿ ಜನರು ತಮಗೆ ಅರಿಯದೇ ಅಳವಡಿಸಿಕೊಂಡಿರುವ ವರ್ಗಹೋರಾಟವಾಗಿದೆ ಎನ್ನಬಹುದು. ಇಂತಹ ಇನ್ನೂ ಅನೇಕ ಕಥೆಗಳು ಜನಪದರಲ್ಲಿ ಕಾಣಸಿಗುತ್ತವೆ. ಬಡತನದಲ್ಲಿರುವ ಅಮಾಯಕ ಬಡಮಹಿಳೆಯರನ್ನು ಬಲಿಪಶು ಮಾಡಲು ಬಯಸುವ ದುರುಳರು ಹಾಗೂ ಮೇಲ್ವರ್ಗದವರು, ಅವರ ಕಿರುಕುಳ ತಾಳಲಾರದೆ ರಾತ್ರೋರಾತ್ರಿ ಹುಟ್ಟಿಬೆಳೆದ ಊರನ್ನು ತೊರೆಯುವ ಬಡವರು ಪಾತ್ರಗಳಾಗಿರುವ ಜನಪದ ಕಥೆಗಳು ಕನ್ನಡದಲ್ಲಿ ಸಿಗುತ್ತವೆ. ಆದರೆ ಈ ಕಥೆಯಲ್ಲಿ ಬಡವನು ಊರನ್ನು ತೊರೆಯುವುದಿಲ್ಲ. ಬದಲಿಗೆ ಉಪಾಯದಿಂದ ತನ್ನ ಮಡದಿಯನ್ನು ವಶಪಡಿಸಿಕೊಳ್ಳಲು ಸಿರಿವಂತನು ಮಾಡಿದ ಕುತಂತ್ರವನ್ನು ಸೋಲಿಸಿ ಗೆಲ್ಲುತ್ತಾನೆ. ಸಿರಿವಂತನಿಗೆ ಇದರಿಂದ ಪರಸ್ತ್ರೀಯನ್ನು ಮೋಹಿಸಬಾರದು, ಬೇರೆಯವರ ಅದರಲ್ಲೂ ಬಡವರ ಹೆಣ್ಣನ್ನು ಗೌರವದಿಂದ ಕಾಣಬೇಕೆಂದು ಜ್ಞಾನೋದಯ ಆಗುತ್ತದೆ. ಅವನು ಊರ ಜನರ ಮುಂದೆ ತನ್ನ ತಪ್ಪನ್ನು ಒಪ್ಪಿಕೊಂಡು ಕ್ಷಮೆಯಾಚಿಸುತ್ತಾನೆ.

ಈ ಕಥೆಯ ವಿಶೇಷತೆಯಿರುವುದು ಬಡವನು ಜಾಣತನದಿಂದ ಗೆಲ್ಲುವುದರಲ್ಲಿ ಮಾತ್ರವಲ್ಲ. ಸಿರಿವಂತನಿಗೆ ಕ್ಷಮೆಕೇಳುವಂತೆ ಮಾಡುವುದರಲ್ಲಿ. ಅವನ ಆಲೋಚನ ಕ್ರಮವನ್ನು ಬದಲಿಸುವಲ್ಲಿ. ಬಡವನ ಈ ಉಪಾಯವು ಸಾಮುದಾಯಿಕ ವಿವೇಕದ ಸಂಕೇತದ ಹಾಗೆ ಕಾಣುತ್ತದೆ. ಆದ್ದರಿಂದ ಬಡವರ ಉಪಾಯಗಾರಿಕೆಗೆ ಕೇವಲ ಯುದ್ಧಗೆಲ್ಲುವ ಉದ್ದೇಶವಿಲ್ಲ. ಅದಕ್ಕೆ ಆರೋಗ್ಯವಂತ ಊರನ್ನು ಹೊಸ ಸಮಾಜವನ್ನು ಕಟ್ಟುವ ಉದ್ದೇಶವೂ ಇದ್ದಂತೆ ಕಾಣುತ್ತದೆ.

ಈ ಕಥೆಯಲ್ಲಿ ಸಿರಿವಂತರು ದೈವಿಕ ಶಕ್ತಿಯಿಂದ ಮಕ್ಕಳು ಪಡೆಯುವ ಪ್ರಸಂಗವಿದ್ದು, ಕಷ್ಟದಿಂದ ಪಾರಾಗುವ ಸನ್ನಿವೇಶವಿದೆ. ಮಕ್ಕಳ ಫಲವಿಲ್ಲದ ಶ್ರೀಮಂತರಿಗೆ ದೇವರ ಹರಕೆಯಿಂದ ಒಂದು ಮಗುವು ಜನಿಸುತ್ತದೆ. ಆದರೆ ಆ ಮಗು ಜನಿಸಿದ ಕೂಡಲೇ ಆ ಮಗುವಿನ ತಂದೆ ತಾಯಿ ಸಾಯುತ್ತಾರೆ ಎಂಬ ಭವಿಷ್ಯವಾಣಿ ಇರುತ್ತದೆ. ಆದರೆ ಅವರು ಮಕ್ಕಳನ್ನು ಪಡೆಯುವುದಕ್ಕಾಗಿ ಸಾವಿಗೂ ಸಿದ್ಧವಾಗುತ್ತಾರೆ. ಅವರಿಗೆ ಹೆಣ್ಣುಮಗು ಹುಟ್ಟುತ್ತದೆ. ಅದು ಹುಟ್ಟಿದ ಕೂಡಲೇ ಅದರ ತಂದೆತಾಯಿ ಸಾವನ್ನಪ್ಪುತ್ತಾರೆ. ಆಗ ಆ ಮಗು ತಬ್ಬಲಿಯಾಗುತ್ತದೆ. ಅದು ತನ್ನ ತಂದೆಯ ಸಹಾಯಕನಾಗಿದ್ದ ಮಂತ್ರಿಯ ಮನೆಯಲ್ಲಿ ಬೆಳೆಯಲಾರಂಭಿಸುತ್ತದೆ. ಬೆಳೆದು ಪ್ರಾಯಕ್ಕೆ ಬರುತ್ತದೆ. ಆಕೆಗೆ ತನ್ನ ಮಗನನ್ನೇ ಮದುವೆ ಮಾಡಿಕೊಡಬೇಕು ಎಂದು ಸಾಕಿದ ಮಂತ್ರಿಯು ಆಲೋಚನೆ ಮಾಡುತ್ತಾನೆ. ಮನೆಯಲ್ಲಿ ಮದುವೆಯ ಸಿದ್ಧತೆ ನಡೆಯುತ್ತದೆ.

ಆಗ ಒಂದು ದಿನ ಮನೆಯಲ್ಲಿರುವ ಮುದುಕಿಯು ಆ ಹುಡುಗಿಗೆ ನಿನ್ನ ತಂದೆ ತಾಯಿ ಇದ್ದರೆ, ನೀನು ಬಯಸಿದ ಕಡೆ ವಿಜೃಂಭಣೆಯಿಂದ ಮದುವೆ ಮಾಡುತ್ತಿದ್ದರು ಎಂದು ಬಾಯಿತಪ್ಪಿ ಹೇಳುತ್ತದೆ. ಇದರಿಂದ ಕುತೂಹಲಗೊಂಡ ಆ ಹುಡುಗಿ ತನ್ನ ಹುಟ್ಟಿನ ಹಿನ್ನೆಲೆಯಲ್ಲಿ ತಿಳಿದುಕೊಳ್ಳುತ್ತಾಳೆ. ಮಂತ್ರಿ ಮಗನಿಗೆ ಮದುವೆ ಮಾಡುತ್ತಿರುವ ವಿಷಯ ತಿಳಿದುಕೊಳ್ಳುತ್ತಾಳೆ. ಈ ಮದುವೆಯಿಂದ ತಪ್ಪಿಸಿಕೊಳ್ಳುವುದಕ್ಕೆ ಅವಳು ಒಂದು ಉಪಾಯ ಮಾಡುತ್ತಾಳೆ. ಅವಳು ನನ್ನ ನಿಜವಾದ ತಂದೆ ತಾಯಿ ಎಲ್ಲಿ ಎಂದು ಸಾಕಿದ ಮಂತ್ರಿಗೆ ಪ್ರಶ್ನೆ ಮಾಡುತ್ತಾಳೆ. ಅವನು ನಿನ್ನ ತಂದೆ ತಾಯಿ ಈ ತೋಟದಲ್ಲಿ ಸಮಾಧಿಯಾಗಿದ್ದಾರೆ ಎನ್ನುತ್ತಾನೆ. ಆಕೆ ಆ ಸಮಾಧಿಯ ಬಳಿಗೆ ಬಂದು ಗೊಳೊ ಎಂದು ಅತ್ತುಕರೆದು ರಾತ್ರಿಯೇ ಅಲ್ಲಿಂದ ತಪ್ಪಿಸಿಕೊಳ್ಳುತ್ತಾಳೆ. ತನಗೆ ಇಷ್ಟಕ್ಕೆ ವಿರುದ್ಧವಾಗಿ ನಡೆದಿರುವ ಮದುವೆಯಿಂದ ಸಮಾಧಿ ನೋಡುವ ನೆಪದಲ್ಲಿ ಪಾರಾಗುತ್ತಾಳೆ.

ವಾಸ್ತವವಾಗಿ ಈ ಉಪಾಯಗಾರಿಕೆ ಮಾಡುವ ರಾಜಕುಮಾರಿಯು ಬಡವಳಲ್ಲ. ಆದರೆ ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಸ್ವತಂತ್ರ್ಯವಾದ ನಿರ್ಧಾರವನ್ನು ತೆಗೆದುಕೊಳ್ಳಲು ಸಾಧ್ಯವಿಲ್ಲದ ಇಕ್ಕಟ್ಟಿನಲ್ಲಿರುವ ಮಹಿಳೆಯಾಗಿದ್ದಾಳೆ. ಅವಳು ತನ್ನ ಸಾಕಿದವರ ಹಿರಿಯರ ಅಣತಿಯಂತೆಯೇ ನಡೆಯಬೇಕು. ಅವರು ಒಪ್ಪಿದ ವರವನ್ನೇ ಆಯ್ಕೆ ಮಾಡಿಕೊಳ್ಳಬೇಕು. ಇಂತಹ ಕಟ್ಟುಪಾಡನ್ನು ಸಮಾಜವು ಬಡವರ ಮೇಲೆ ಹೇರಿದಂತೆ ಮಹಿಳೆಯರ ಮೇಲೂ ಬಲವಂತವಾಗಿ ಹೇರಿದೆ. ಒಂದೊಮ್ಮೆ ಮಹಿಳೆ ತನ್ನ ಮೇಲಿನ ಕಟ್ಟುಪಾಡನ್ನು ಹರಿದು ಪ್ರತಿಭಟಿಸಿದರೆ ಅವಳಿಗೆ ಶಿಕ್ಷಿಸಲಾಗುತ್ತದೆ. ಶಿಕ್ಷೆಯಿಂದ ತಪ್ಪಿಸಿಕೊಳ್ಳಲು ಅವಳು ಮನೆಯನ್ನು ಬಿಟ್ಟು ಹೊರಗೆ ಹೋದರೆ, ಅವಳ ಪಲಾಯನವನ್ನು ಕೆಟ್ಟರೀತಿಯಿಂದ ಅರ್ಥೈಸಲಾಗುತ್ತದೆ. ಅವಳು ಓಡಿಹೋಗಿದ್ದಾಳೆ ಎನ್ನುತ್ತದೆ. ಶೀಲಗೆಟ್ಟವಳು ಎಂಬ ಪದವನ್ನು ಬಳಸುತ್ತದೆ. ಇಂತಹ ಇಕ್ಕಟ್ಟಿನ ಪ್ರಸಂಗಗಳಲ್ಲಿ ಸಮಾಜದ ನಿಂದನೆಯನ್ನು ಸಹಿಸಿಕೊಳ್ಳದ ಅನೇಕ ಮಹಿಳೆಯರು ಆತ್ಮಹತ್ಯೆ ಮಾಡಿಕೊಳ್ಳುವುದು ಇದೆ. ಸಮಾಜವು ಮಹಿಳೆಯರನ್ನು ಅವರ ಆಯ್ಕೆಯ ಬದುಕನ್ನು ನಡೆಸಲು ಬಿಡುವುದಿಲ್ಲ. ಅವರು ತಮ್ಮ ಇಷ್ಟವನ್ನು ಚಲಾಯಿಸಿದರೆ ಅವರನ್ನು ನೆಮ್ಮದಿಯಾಗಿ ಇರಲು ಬಿಡುವುದಿಲ್ಲ. ಆಗ ಉಪಾಯಗಾರಿಕೆಗಳು ಅವರಿಗೆ ನೆರವಿಗೆ ಬರುತ್ತವೆ. ಈ ಹೆಣ್ಣು ಬಡವರ ಮನೆಯವಳಾದರೆ, ಕೆಳಜಾತಿಯವಳಾದರೆ, ಅವಳ ಮೇಲೆ ಇನ್ನೂ ಹೆಚ್ಚಿನ ಕಷ್ಟಗಳು ಕಾದಿರುತ್ತವೆ.

ರಾಜ ರಾಣಿ ಕಥೆಯಲ್ಲಿ ರಾಜಕುಮಾರಿಯು ಉಪಾಯಗಾರಿಕೆಯ ಮೂಲಕ ತಪ್ಪಿಸಿಕೊಂಡು ಒಬ್ಬ ಬಡವನ ಮನೆಯ ಆಶ್ರಯ ಪಡೆಯುತ್ತಾಳೆ. ವಿಚಿತ್ರವೆಂದರೆ ಅವಳು ಬಡವನ ಜಮೀನಿನಲ್ಲಿ ಕಾಲಿಟ್ಟ ತಕ್ಷಣ ಅವನ ಹೊಲದ ಫಸಲು ಸಮೃದ್ಧವಾಗುತ್ತದೆ. ಬಿತ್ತಿದ ಗಳಿಗೆಯಲ್ಲಿ ಬೆಳೆ ಬೆಳೆದುಬಿಡುತ್ತದೆ. ಇದರಿಂದ ಆ ಬಡವನಿಗೆ ತುಂಬಾ ಸಂತಸವಾಗುತ್ತದೆ. ಈ ಕಥೆಯು ಬಡವರ ಹೊಲದಲ್ಲಿ ಶ್ರೀಮಂತರು ಕಾಲಿಟ್ಟರೆ ಐಶ್ವರ್ಯ ಬಂದಂತೆ ಎನ್ನುವ ಬಡವರ ಮನೋಭಾವನೆಯನ್ನು ಬಿಂಬಿಸುತ್ತದೆ. ಆದರೆ ವಾಸ್ತವದಲ್ಲಿ ಇದು ಬಡವರ

ಕಲ್ಪನೆಯಾಗಿದೆ.

ಬಡವರ ಮನೆಗೆ ರಕ್ಷಣೆ ಕೋರಿ ಬಂದ ರಾಜಕುಮಾರಿಯ ಮೇಲೆ ಆಪಾದನೆಗಳು ಬಂದಾಗ, ಅವಳು ಸುಳ್ಳು ಹೇಳಿ ತಪ್ಪಿಸಿಕೊಳ್ಳುತ್ತಾಳೆ. ತನಗೆ ಆಶ್ರಯಕೊಟ್ಟಿರುವ ಮನೆಯ ಅಜ್ಜಿಗೆ ಸಹಾಯ ಮಾಡುವುದಕ್ಕಾಗಿ ತಾನೂ ಕುಟ್ಟುವ ಕೆಲಸ ಮಾಡುತ್ತೇನೆ ಎಂದು ಹೇಳಿದಾಗ ಅಜ್ಜಿಯು 'ಬೇಡತಾಯಿ ನೀ ಕುಟ್ಟಿದ್ರ ನನಗೆ ಕೂಲಿ ನೀಡುವುದಿಲ್ಲ' ಎನ್ನುವಳು. ಇಲ್ಲಿ ಬಡವರ ಪ್ರಾಮಾಣಿಕಥೆ ಮತ್ತು ಕಷ್ಟಪಡುವ ಗುಣವು ತಿಳಿಯುವುದು. ಆದರೆ ರಾಜಕುಮಾರಿಯು ಉಪಾಯದ ಮೂಲಕ ಅಜ್ಜಿ ಮೂತ್ರ ವಿಸರ್ಜನೆಗೆ ಹೋದಾಗ ಕುಟ್ಟುವ ಕೆಲಸವನ್ನು ಮಾಡುತ್ತಾಳೆ. 'ಏನಮ್ಮ ಹೀಗೆ ಮಾಡಿದೆ?' ಎಂದು ಅಜ್ಜಿ ಕೇಳಿದಾಗ 'ನಾ ಕುಟ್ಟಿ ಕೊಟ್ಟಿಲ್ಲಂತ ಹೇಳತೀನಿ. ನೀ ಕುಟ್ಟೀನಂತ ಹೇಳಿ ರೊಕ್ಕ ತೆಗೆದುಕೊ' ಎಂದು ರಾಜಕುಮಾರಿ ಉತ್ತರಿಸುತ್ತಾಳೆ. ಇಲ್ಲಿ ಬಡವರು ಉಪಾಯದಿಂದ ಹೆಚ್ಚಿನ ಸಂಪತ್ತನ್ನು ಪಡೆಯಲು ಆಸೆಪಡದೆ ಇರುವುದನ್ನು ಕಾಣಬಹುದು.

ಕಥೆಯು ಇಲ್ಲಿ ವಿಚಿತ್ರ ತಿರುವನ್ನು ಪಡೆಯುತ್ತದೆ. ಒನಕೆಯಿಂದ ಕವಳೆ ಕುಟ್ಟಿದ ರಾಜಕುಮಾರಿಯ ಕೈಗಳಲ್ಲಿ ಗುಳ್ಳೆಗಳು ಏಳುತ್ತವೆ. ಆ ಗುಳ್ಳೆಗಳಿಂದ ಮಗುವಿನ ಜನನವಾಗುತ್ತದೆ. ಇದರಿಂದ ಜನರು ಈ ಬಡವನಿಗೂ ರಾಜಕುಮಾರಿಗೂ ಅನೈತಿಕ ಸಂಬಂಧವಿರುವ ಆಪಾದನೆ ಬರುತ್ತದೆ. ಇದರಿಂದ ಬೇಸತ್ತು ರಾಜಕುಮಾರಿಯು ಅಲ್ಲಿಂದ ತಪ್ಪಿಸಿಕೊಂಡು ಹೋಗುತ್ತಾಳೆ. ಅವಳಿಗೆ ಜನಿಸಿದ ಮಗುವು ದೈವಿಕ ಶಕ್ತಿಯಿಂದ ಹುಟ್ಟಿರುವುದರಿಂದ ಅದು ತನ್ನ ತಾಯಿಯಿಂದ ತಪ್ಪಿಸಿಕೊಳ್ಳಲು ಉಪಾಯದಿಂದ ವಿಸರ್ಜನೆಗೆ ಹೋಗುತ್ತೇನೆಂದು ಹೇಳಿ ತಪ್ಪಿಸಿಕೊಳ್ಳುತ್ತದೆ. ಆ ಹುಡುಗನಿಗೆ ಸಮುದ್ರದಲ್ಲಿ ಈಸಾಡಬೇಕೆನ್ನುವ ಆಸೆ ಹುಟ್ಟುತ್ತದೆ. ಸಮುದ್ರದಲ್ಲಿ ನೆಗೆಯುತ್ತಾನೆ. ಆ ಸಮಯಕ್ಕೆ ಸರಿಯಾಗಿ ಅವನಿಗೆ ದೈವದ ದಯೆಯಿಂದ ಮೂರು ವಜ್ರದ ಹರಳು ಸಿಗುತ್ತವೆ. ಆ ವಜ್ರದ ಹರಳುಗಳಿಂದ ತಾಯಿಯೂ ಮಗನೂ ಹೊಸ ಊರಿಗೆ ಬಂದು ಹೊಸ ಜೀವನವನ್ನು ಮಾಡುತ್ತಾರೆ.

ಹೀಗೆ ಜೀವನ ಮಾಡುವಾಗ ಅವರ ಮನೆಯ ಪಕ್ಕದಲ್ಲಿದ್ದ ಅರಮನೆಯಲ್ಲಿ ಒಬ್ಬ ರಾಜಕುಮಾರಿ ಇರುತ್ತಾಳೆ. ಅವಳ ಮೇಲೆ ಈ ಅಂಗೈಯಲ್ಲಿ ಹುಟ್ಟಿದ ಹುಡುಗನಿಗೆ ಮನಸ್ಸಾಗುತ್ತದೆ. ಆಕೆಯತ್ತ ಆತ ಮಂತ್ರಶಕ್ತಿಯ ವಜ್ರದ ಹರಳನ್ನು ಆಕೆಯ ಮೇಲೆ ಒಗೆಯುತ್ತಾನೆ. ಹಾಗೆ ಒಗೆದಾಗ ಆಕೆ ಇಂತಹ ಬೆಲೆಬಾಳುವ ವಜ್ರದ ಹರಳು ಇರುವ ಈತ ಎಷ್ಟು ಶ್ರೀಮಂತನಾಗಿರಬೇಕೆಂದು ಊಹಿಸಿ, ಅವನಿಗೆ ಒಲಿಯುತ್ತಾಳೆ. ಮುಂದೆ ತಾನು ಇಷ್ಟಪಟ್ಟಂತಹ ಹುಡುಗನ ಬಗ್ಗೆ ತನ್ನ ತಂದೆಯ ಮುಂದೆ ಪ್ರಸ್ತಾಪಿಸುತ್ತಾಳೆ. ಆಗ ಆ ರಾಜನು ಯಾರು ಮದುವೆಯ ಸಾಮಾನುಗಳನ್ನು ವಜ್ರದ ಹರಳಿನಿಂದಲೇ ಮಾಡಿಕೊಂಡು ಬರುವರೊ ಅವರಿಗೆ ನನ್ನ ಮಗಳನ್ನು ಧಾರೆ ಎರೆದುಕೊಡುತ್ತೇನೆ ಎಂದು ಡಂಗುರೂ ಸಾರುತ್ತಾನೆ. ಈ ಶರತ್ತಿಗೆ ಒಪ್ಪಿದ ಹುಡುಗ ಒಬ್ಬ ರಾಕ್ಷಸಿಯ ನೆರವಿನಿಂದ ಈ ಸಾಮಾನುಗಳನ್ನು ಮಾಡಿಸಿಕೊಂಡು

ಬರುತ್ತಾನೆ. ಕೊನೆಗೆ ಅವನಿಗೆ ಅವನು ಪ್ರೀತಿಸಿದ ರಾಜಕುಮಾರಿಯು ದಕ್ಕುತ್ತಾಳೆ.

ಈ ಕಥೆಯಲ್ಲಿ ಮುಖ್ಯವಾದುದು ಅನಾಥಳಾದ ರಾಜಕುಮಾರಿಯು ಸಾಮಾಜಿಕ ಅಪಾದನೆ ಹೊತ್ತು ಊರೂರು ಅಲೆಯುವುದು. ಬಡವನೂ ತಬ್ಬಲಿಯೂ ಆದ ಅವಳ ಮಗನು ತನ್ನ ತಾಯಿಯ ಜತೆ ಅನಾಥನಾಗಿ ಊರೂರು ಅಲೆಯುವುದು. ಆದರೆ ಇಬ್ಬರ ಅನಾಥಸ್ಥಿತಿಯೂ ಬಡತನವೂ ಮುಗಿಯುವಂತೆ ಅವರಿಗೆ ದೈವವು ಕೈಹಿಡಿಯುತ್ತದೆ. ರಾಕ್ಷಸಿಯ ಗುಹೆಗೆ ಹೋಗಿ ವಜ್ರದ ಸಾಮಾನು ಮಾಡಿಸಿಕೊಂಡು ಬರುವ ಹುಡುಗನ ಧೈರ್ಯ ನೆರವಾಗುತ್ತದೆ.

ಬಡವರು ಅನಾಥರು ತಬ್ಬಲಿಗಳು ಕಷ್ಟದಿಂದ ತಪ್ಪಿಸಿಕೊಳ್ಳಲು ಇಲ್ಲವೇ ಸಮಾಜದ ಅಪವಾದದಿಂದ ಪಾರಾಗಲು ಪಲಾಯನ ಮಾಡುತ್ತಾರೆ. ಇಲ್ಲವೇ ದೈವಬಲದಿಂದ ಕಷ್ಟಗಳನ್ನು ನೀಗಿಕೊಂಡು ಸುಖದ ದಡ ತಲುಪುತ್ತಾರೆ. ಮಹಿಳೆಯು ತನ್ನ ತಂದೆ ತಾಯಿ, ಹಿರಿಯರ ಇಷ್ಟಕ್ಕೆ ವಿರುದ್ಧ ನಡೆದುಕೊಂಡರೆ ಬೀದಿಗೆ ಬೀಳುವ ಸನ್ನಿವೇಶ ಬರುತ್ತದೆ. ಅದರಲ್ಲಿಯೂ ಮದುವೆಯ ವಿಷಯ ಬಂದಾಗ ತಮ್ಮ ಜೀವನ ಸಂಗಾತಿಯನ್ನು ಆರಿಸಿಕೊಳ್ಳುವ ಅವಕಾಶ ಬಂದಾಗ, ಹುಡುಗಿಯರು ಸಾಮಾಜಿಕ ಪ್ರತಿರೋಧವನ್ನು ಎದುರಿಸುವರು. ಅವರ ಸ್ವಾತಂತ್ರ್ಯವನ್ನು ಒಪ್ಪದ ಸಾಂಪ್ರದಾಯಿಕ ಸಮಾಜ, ಆಕ್ರೋಶ ತಾಳುತ್ತದೆ. ಈ ಅನಾಥ ಸ್ಥಿತಿಗೆ ಬಡತನವೂ ಸೇರಿದರೆ, ಅವರ ಜೀವನ ಮತ್ತಷ್ಟು ಕಷ್ಟಕ್ಕೆ ಸಿಲುಕುತ್ತದೆ. ಆಗ ಅವರ ಬದುಕಿನಲ್ಲಿ ಧೈರ್ಯ ದೈವದ ನೆರವು, ಅದೃಷ್ಟ ಮತ್ತು ತಂತ್ರಗಾರಿಕೆಗಳು ನೆರವಿಗೆ ಬರುತ್ತವೆ.

ಪುರುಷ ಪ್ರಧಾನ ವ್ಯವಸ್ಥೆಯ ಸಮಾಜದಲ್ಲಿ ಮಹಿಳೆಯು ತನ್ನ ಜಾಣ್ಮೆ ದಿಟ್ಟತನಗಳ ಮುಖಾಂತರ ಹೊಸ ಬದುಕನ್ನು ಅರಸುತ್ತಾಳೆ. ಇದು ಆಧುನಿಕ ಕಾಲದಲ್ಲಿಯೂ ಮಹಿಳಾ ಸ್ವಾತಂತ್ರ್ಯದ ಕ್ರಿಯಾಶೀಲತೆಯ ಭಾಗವಾಗಿದೆ. 'ರಾಜ-ರಾಣಿ' ಕಥೆಯಲ್ಲಿ ತನ್ನ ತಂದೆ ತಾಯಿಯನ್ನು ಕಳೆದುಕೊಂಡ ಅನಾಥಳು ಬಡಕುಂಬಾರನ ಹತ್ತಿರ ಕೆಲಸಕ್ಕೆ ಸೇರುತ್ತಾಳೆ. ಅವಳು ಹುಟ್ಟಿನಿಂದ ರಾಜಕುಮಾರಿಯಾದರೂ ತನ್ನ ಸ್ವಾತಂತ್ರ್ಯಕ್ಕಾಗಿ ಬಡತನದ ಬದುಕಿಗೆ ಧುಮುಕುತ್ತಾಳೆ. ಅವಳ ಬದುಕನ್ನು ಕಟ್ಟಿಕೊಳ್ಳುವ ಛಲ ದೃಢಸಂಕಲ್ಪ ಅಪೂರ್ವವಾಗಿ ಕಾಣುತ್ತದೆ. ಆಕೆ ತನ್ನನ್ನು ಮೋಸಮಾಡಿ ಮದುವೆಮಾಡಲು ಹೊಂಚು ಹಾಕುತ್ತಿದ್ದವರಿಂದ ಉಪಾಯದ ಮೂಲಕ ಪಾರಾಗುತ್ತಾಳೆ. ಎರಡನೆಯ ಮನೆಯಲ್ಲಿ ತನ್ನ ಮಗನ ಹೊಸಬಾಳನ್ನು ಕಟ್ಟಲು ಬಡಕುಂಬಾರನ ಮನೆ ತೊರೆಯುತ್ತಾಳೆ. ಸಾಮಾಜಿಕ ವಾಸ್ತವತೆಯ ನೆಲೆಯಿಂದ ನೋಡಿದಾಗ, ಈ ಕಥೆಯು ಮನೆತೊರೆದ ಸ್ತ್ರೀಯರಿಗೆ ಮತ್ತು ಅವರ ಮಕ್ಕಳಿಗೆ ಬಾಳಿನಲ್ಲಿ ಸ್ವತಂತ್ರ ವಾಗಿ ಬದುಕುವ ಅವಕಾಶವನ್ನು ಸಮಾಜವು ಕೊಟ್ಟಿಲ್ಲದಿರುವುದನ್ನು ಸೂಚಿಸುತ್ತದೆ. ಅಂತಹ ಸ್ವಂತಿಕೆಯ ಬದುಕನ್ನು ಪಡೆದುಕೊಳ್ಳಲು ಅವರು ಬಗೆಬಗೆಯ ಸೆಣಸಾಟ ಮಾಡುವುದನ್ನು ಸಹ ಸೂಚಿಸುತ್ತದೆ.

ಇಲ್ಲಿಯೇ ಕುವೆಂಪು ಅವರ 'ಸಾಲದ ಮಗು' ಎಂಬ ಕಥೆ ನೆನಪಾಗುತ್ತದೆ. ಊಳಿಗಮಾನ್ಯ

ವ್ಯವಸ್ಥೆಯಲ್ಲಿರುವ ಜೀತಗಾರಿಕೆಯ ದೌರ್ಜನ್ಯವನ್ನು ಕಣ್ಣಿಗೆ ಕಟ್ಟುವಂತೆ ಈ ಕಥೆಯಿದೆ. ಇದರ ನಾಯಕ ಸುಬ್ಬು ಹತ್ತು ವರ್ಷದ ಹುಡುಗ. ಈತನ ತಂದೆ ತನ್ನ ಮದುವೆಗೆ ನೂರು ರೂಪಾಯಿ ಸಾಲ ಮಾಡಿ ಸತ್ತಿರುತ್ತಾನೆ. ಆ ಸಾಲದ ಬಾಕಿ ಗೌಡರು ಸುಬ್ಬುವನ್ನು ಜೀತಕ್ಕೆ ಹಾಕಿಕೊಂಡಿರುತ್ತಾನೆ. ಒಂದು ದಿನ ಭೀಕರವಾದ ಮಳೆ. ಹಗಲಿಡೀ ಕೆಲಸ ಮಾಡಿದ ಸುಬ್ಬು ಜ್ವರದಿಂದ ನರಳುತ್ತಿರುತ್ತಾನೆ. ಆದರೆ ಗೌಡರು ಅವನಿಗೆ ಹೊಳೆಯಲ್ಲಿ ಕಟ್ಟಿದ ಕುಣಿಯಲ್ಲಿ ಮೀನು ಸಿಕ್ಕಿದೆಯೆ ನೋಡಿ ಬಾ ಎಂದು ಬೆತ್ತದಿಂದ ಹೊಡೆದು ಕಳಿಸುತ್ತಾರೆ. ಸುಬ್ಬು ಗದ್ದೆಗೆ ಸುರಿವ ಮಳೆಯಲ್ಲೇ ಗಾಳಿ ಮಿಂಚು ಗುಡುಗು ಕತ್ತಲೆ ತುಂಬಿದ ಆ ಕ್ರೂರರಾತ್ರಿಯಲ್ಲಿ ನಡೆಯುತ್ತಾನೆ. ಆದರೆ ಮನೆಗೆ ಅವನು ಮರಳಿ ಬರುವುದಿಲ್ಲ. ಕುಣಿಯಲ್ಲಿ ಮೀನು ತಿನ್ನಲು ಬಂದು ಸೇರಿಕೊಂಡಿದ್ದ ಕೃಷ್ಣಸರ್ಪವೊಂದು ಕಡಿದು ಸಾಯುತ್ತಾನೆ. ಮುಂಜಾನೆ ಸುಬ್ಬು ಎಲ್ಲೋ ಅಡಗಿರಬೇಕು, ಅವನಿಗೆ ಹಿಡಿದು ಚೆನ್ನಾಗಿ ಶಿಕ್ಷಿಸಬೇಕು ಎಂದು ಅರಸುತ್ತ ಬಂದ ಗೌಡರಿಗೆ ಸುಬ್ಬುವಿನ ಹೆಣ ಕಾಣುತ್ತದೆ. ಗೌಡರು ಬಹಳ ವ್ಯಸನ ಪಟ್ಟುಕೊಂಡು ಸಾಲದ ಹಣ ಕೈಬಿಟ್ಟು ಹೋಯಿತೆಂದು ಕೊರಗುತ್ತಾರೆ.

ಈ ಕಥೆಯ ವಾಕ್ಯವಾಕ್ಯವೂ ಬಡಹುಡುಗನ ಜೀತದ ಕ್ರೌರ್ಯವನ್ನೇ ತೋರುತ್ತದೆ. ಊಳಿಗಮಾನ್ಯ ವ್ಯವಸ್ಥೆಯಲ್ಲಿ ಬಡ ಕಾರ್ಮಿಕರಿಗೆ ಆಗುವ ಹಿಂಸೆಯು ಇಲ್ಲಿ ಮಡುಗಟ್ಟಿದೆ. ಆದರ ಜನಪದ ಕಥೆಗಳು ಬಡವರು ಅನುಭವಿಸುವ ಹಿಂಸೆಯನ್ನು ಹೀಗೆ ದುರಂತದಲ್ಲಿ ಮುಗಿಸುವುದಿಲ್ಲ. ಅಲ್ಲಿ ಸಾಮಾಜಿಕ ವಾಸ್ತವತೆಯನ್ನು ಅವು ತಮ್ಮದೇ ಆದ ರೀತಿಯಲ್ಲಿ ನಿಭಾಯಿಸುತ್ತವೆ. ಅವು ಎಲ್ಲ ಕಷ್ಟಗಳ ನಡುವೆ ಬಡವರು ಬದುಕಿ ಉಳಿಯುತ್ತಾರೆ ಎಂದು ಕಲ್ಪಿಸಿಕೊಳ್ಳುತ್ತವೆ. ಈ ಕಲ್ಪನೆಯ ಭಾಗವಾಗಿ ಬಡವರಿಗೆ ದೈವವು ಬಂದು ನೆರವಾಗುತ್ತದೆ. ಅದೃಷ್ಟವು ನೆರವಾಗುತ್ತದೆ. ಇಲ್ಲವೆ ಅವರಲ್ಲೇ ಹೊಳೆಯುವ ಉಪಾಯಗಳು ನೆರವಾಗುತ್ತವೆ. ಇದು ಬಡತನ ಮತ್ತು ಅವರ ಕಷ್ಟಗಳನ್ನು ಜನಪದ ಕಥೆಗಳೂ ಆಧುನಿಕ ಸಾಹಿತ್ಯದ ಸಣ್ಣಕಥೆಗಳು ನಿರ್ವಹಿಸುವ ಪರಿಯಾಗಿದೆ.

'ಅಳಿಯನ ಜಾಣತನ' ಕಥೆಯಲ್ಲಿ ಮಾವ ಅಳಿಯರ ಪ್ರಕರಣವಿದೆ. ಅದರಲ್ಲಿ ಒಬ್ಬ ಬಡಕುಟುಂಬದಿಂದ ಬಂದ ವ್ಯಕ್ತಿಯು ಹೊಸತಾಗಿ ಮದುವೆಯಾಗಿರುತ್ತಾನೆ. ಅವನ ಅತ್ತೆಮಾವಂದಿರು ಸಿರಿವಂತರು. ಒಮ್ಮೆ ಈ ಬಡ ಅಳಿಯನು ಮಾವನ ಮನೆಗೆ ಹೋದಾಗ ತನ್ನ ಬಡತನದ ಕಾರಣದಿಂದಲೇ ಮುಜುಗರ ಸಂಕೋಚಗಳನ್ನು ಅನುಭವಿಸುತ್ತಾನೆ. ಮಾವನ ಅಂತಸ್ತಿಗೆ ಸಮನಾಗಿ ನಿಲ್ಲುವ ಶಕ್ತಿಯಿಲ್ಲದ ಅಳಿಯನು ಅವರ ಜೊತೆ ಮಾತಾಡುವುದಕ್ಕೂ ಕಷ್ಟಪಡುತ್ತಾನೆ. ಶ್ರೀಮಂತ ಬಡವ ಎಂಬ ವರ್ಗಗಳ ಹಿನ್ನೆಲೆಯಲ್ಲಿ ನೋಡಿದಾಗ ಬಡವರು ಸಿರಿವಂತರ ಜೊತೆ ಬೆರೆಯಲು ಮಾಡುವ ಹೆಣಗಾಟವು ಇಲ್ಲಿ ಕಾಣುತ್ತದೆ.

ಈಗ ಅಳಿಯನ ಕಷ್ಟವೆಂದರೆ ಅತ್ತೆ ಮಾವನ ಮುಂದೆ ತನ್ನತನವನ್ನು ಸಾಬೀತುಪಡಿಸಬೇಕು.

ಬಡವನಾದ ಅವನು ಅವರನ್ನು ತನ್ನ ಸಂಪತ್ತಿನಿಂದ ಮೆಚ್ಚಿಸಲು ಸಾಧ್ಯವಿಲ್ಲ. ಸಂಪತ್ತಿನಿಂದ ಮೆಚ್ಚಿಸಲು ಆಗದ ಅವನು ತನ್ನ ಶ್ರಮ, ಪ್ರಾಮಾಣಿಕಥೆ, ದುಡಿಮೆ ಹಾಗೂ ಉಪಾಯಗಾರಿಕೆಗಳ ಮೂಲಕ ಮೆಚ್ಚಿಸುತ್ತಾನೆ. ಹಿಂದಿನ ಕಥೆಗಳಲ್ಲಿ ಬಡವರು ಸಿರಿವಂತರನ್ನು ಸೋಲಿಸಿ ಲೋಕವನ್ನು ಮೆಚ್ಚಿಸಲು ಉಪಾಯ ಮಾಡಿದರೆ, ಇಲ್ಲಿ ಒಂದೇ ಕುಟುಂಬದ ಒಳಗೆ ಬಡಅಳಿಯ ತನ್ನ ಸಾಹುಕಾರ ಮಾವನನ್ನು ಮೆಚ್ಚಿಸಲು ಉಪಾಯ ಮಾಡುವನು. ಅವನು ಮಾಡುವ ಉಪಾಯವೆಂದರೆ, ಮಾವನ ಮನೆಗೆ ಕದಿಯಲು ಬರುವ ಕಳ್ಳರನ್ನು ಹಿಡಿಯುವುದು. ಇಲ್ಲದವರು ಯಾವಾಗಲೂ ಒಂದು ಬಗೆಯ ಐಡೆಂಟಿಟಿ ಬಿಕ್ಕಟ್ಟಿನಿಂದ ನರಳುತ್ತಿರುತ್ತಾರೆ. ಅದು ಅವರಿಗೆ ಮತ್ತೊಬ್ಬರಿಗೆ ಸಮಸಮನಾಗಿ ನಿಲ್ಲುವ ಛಲವನ್ನು ಹುಟ್ಟುಹಾಕುತ್ತದೆ. ಆಗ ಅವರು ತಮ್ಮ ಬುದ್ಧಿಯನ್ನು ತಮ್ಮತನ ಸಾಬೀತುಪಡಿಸಲು ಬಳಸುತ್ತಾರೆ. ಆಗ ಈ ಬಗೆಯ ಉಪಾಯಗಾರಿಕೆಗಳು ಹುಟ್ಟುತ್ತವೆ. ಈ ಅರ್ಥದಲ್ಲಿ ಈ ಬಗೆಯ ಕಥೆಗಳು ಐಡೆಂಟಿಟಿ ಬಿಕ್ಕಟ್ಟನ್ನು ಬಗೆಹರಿಸಿಕೊಳ್ಳುವ ಕಥೆಗಳೂ ಆಗಿ ಕಾಣುತ್ತವೆ.

ಈ ಕಥೆಯಲ್ಲಿ ಕಥಾನಾಯಕನ ತಾಯಿಯು ತನ್ನ ಮಗನು ಅತ್ತೆಮಾವರ ಮನೆಗೆ ಹೊರಟು ನಿಂತಾಗ 'ಮನೆಯಲ್ಲಿ ಜ್ವಾಳ ಇಲ್ಲ. ನಿನಗೆ ಊಟಕ್ಕೆ ಒಯ್ಯಲು ಒಂದೇ ಒಂದು ಕುಳ್ಳಿ ಇದೆ' ಎನ್ನುವುದು ಅವರ ಬದುಕಿನ ಅವಸ್ಥೆಯನ್ನು ಮನದಟ್ಟುಮಾಡುತ್ತದೆ. ತನ್ನ ಮಗನ ರಟ್ಟೆಶಕ್ತಿಯನ್ನೇ ನಂಬಿರುವ ತಾಯಿ ಆಕೆ. ಅವನು ದುಡಿದಾಗ ಅವಳ ಹೊಟ್ಟೆ ತುಂಬುವುದು ಇಲ್ಲವಾದಲ್ಲಿ ಉಪವಾಸದಂತ ಸ್ಥಿತಿ. ಅವಳ ಮಗನು ತಾಯಿಯ ಮಾತನ್ನು ನಡೆಸಿಕೊಡುವ ವಿಧೇಯವಂತನಾಗಿ ಕಾಣಿಸುತ್ತಾನೆ. ತಾಯಿ ಮಗನ ಪ್ರೀತಿಪೂರ್ವಕ ಸಂಬಂಧವು ಈ ಕಥೆಯಲ್ಲಿ ಚೆನ್ನಾಗಿ ಮೂಡಿಬಂದಿದೆ. ಮಗನು ಉಪಾಯಗಾರನಾಗಿ ಬೆಳೆಯಲು ಈ ಸಂಬಂಧವು ಒಂದು ಬಗೆಯಲ್ಲಿ ಹಿನ್ನೆಲೆಯಾಗಿ ನಿಲ್ಲುತ್ತದೆ.

ಈ ಕಥೆಯಲ್ಲಿ ಕಥಾನಾಯಕನು ಮುಜಗರದಿಂದ ಉಪವಾಸ ಮಲಗುತ್ತಾನೆ. ಆದರೆ ರಾತ್ರಿಯಲ್ಲಿ ಹಸಿವು ತಾಳದೆ ಅದನ್ನು ನೀಗಿಸಿಕೊಳ್ಳುವುದಕ್ಕಾಗಿ ಅತ್ತೆ ಮಾವರ ಕಣ್ತಪ್ಪಿಸಿ ಊಟ ಮಾಡಲು ಯತ್ನಿಸುತ್ತಾನೆ. ತನ್ನನ್ನು ಕಳ್ಳರು ಟಗರು ಎಂದು ಅಹಪರಿಸಿದಾಗ, ಕಾಡಿನಲ್ಲಿ ಮಧ್ಯ ರಾತ್ರಿಯಲ್ಲಿ ಕಳ್ಳರು ಮಲವಿಸರ್ಜನೆಗೆ ಹೋದಾಗ ತಪ್ಪಿಸಿಕೊಂಡು ಬರುತ್ತಾನೆ. ಮರುದಿವಸ ಕಳ್ಳರು ಮನೆಯ ಎಮ್ಮೆ ಕಳುವು ಮಾಡಲು ಬಂದಾಗ ಎಮ್ಮೆಯನ್ನು ರಕ್ಷಿಸಲು ಕಾವಲು ಕಾಯುವ ನಂಬಿಕೆಯನ್ನು ಅತ್ತೆಮಾವರಿಗೆ ಮೂಡಿಸಿ, ಎಮ್ಮೆಯ ಜೊತೆ ಕಳ್ಳರನ್ನು ಹಿಡಿದು ತರುತ್ತಾನೆ. ಅತ್ತೆಮಾವರ ಪ್ರೀತಿ ಮತ್ತು ಮೆಚ್ಚುಗೆ ಗಳಿಸುವುದಕ್ಕೆ ಮನೆಯ ಅಳಿಯನು ಹೀಗೆ ಅನೇಕ ಉಪಾಯಗಳ ಮೂಲಕ, ಅವರ ಮನೆಗೆ ಬರುವ ಕಳ್ಳರನ್ನು ಸೆರೆಹಿಡಿದು ಕೊಡುತ್ತಾನೆ. ಶ್ರಮ ಹಾಗೂ ಉಪಾಯಗಾರಿಕೆ ಮೂಲಕ ಅತ್ತೆಮಾವರ ಮನಸ್ಸನ್ನು ಗೆಲ್ಲುತ್ತಾನೆ. ಅವರು ಅಳಿಯನ ಜಾಣತನವನ್ನು ಮೆಚ್ಚಿ ಅವನಿಗೆ ಕಾಣಿಕೆಯನ್ನು ನೀಡುತ್ತಾರೆ. ಹೀಗೆ ಈ ಕಥೆಯಲ್ಲಿ ಬಡತನದ ಕೀಳರಿಮೆಯಿಂದ ನರಳುವ ಅಳಿಯನು ತನ್ನ ಮುಜುಗರಗಳನ್ನು

ಗೆಲ್ಲುವ ಸಾಹಸಗಳಿವೆ. ಈ ಕಥೆಯನ್ನು ಓದುವಾಗ, ಬಡವರು ತಮ್ಮ ಅಸ್ತಿತ್ವ ಸಾಮಾಜಿಕ ಗೌರವ ಪಡೆಯಲು ಮಾಡುವ ಒದ್ದಾಟಗಳನ್ನು ಮಾತ್ರ ಗೋಚರಿಸುವುದಿಲ್ಲ. ಬಡತನದ ಕಾರಣಕ್ಕಾಗಿಯೇ ಒಬ್ಬ ವ್ಯಕ್ತಿಯಲ್ಲಿ ಅಪಾರವಾದ ಕೀಳರಿಮೆ ಹುಟ್ಟಿಸುವ ಸಮಾಜದ ಆಲೋಚನ ವಿಧಾನ ಕೂಡ ಗೋಚರವಾಗುತ್ತದೆ. ಇದೊಂದು ಬಗೆಯಲ್ಲಿ ಬಡವರ ಕೀಳರಿಮೆ ಮತ್ತು ಉಳ್ಳವರ ಪ್ರತಿಷ್ಠೆಗಳ ನಡುವಣ ಮಾನಸಿಕ ಯುದ್ಧವೂ ಆಗಿದೆ. ಅನೇಕ ಸಲ ಸಿರಿವಂತರು ಸಜ್ಜನರಾಗಿದ್ದರೂ ಬಡವರಿಗೆ ತಮ್ಮನ್ನೆಲ್ಲಿ ಅಪಮಾನಿಸುವರೊ ಎಂಬ ಅಳುಕು ಇರುತ್ತದೆ. ಹೀಗಾಗಿ ಅವರು ಅಗತ್ಯಕ್ಕಿಂತ ಹೆಚ್ಚಾಗಿ ಸೂಕ್ಷ್ಮಸಂವೇದನೆಯುಳ್ಳವರಾಗಿ ತೋರುವರು. ಚಿಕ್ಕಮುಟ್ಟದಕ್ಕೆಲ್ಲ ಅಗತ್ಯಕ್ಕಿಂತ ಹೆಚ್ಚಾಗಿ ತೀವ್ರವಾಗಿ ಮಿಡಿಯುವ ಮನೋಭಾವ ಬೆಳೆಸಿಕೊಂಡಿರುವರು. ಇದೊಂದು ಸಮಸ್ಯಾತ್ಮಕ ಮನೋಭಾವವಾಗಿದೆ. ಇದು ಸಹಜವಾಗಿ ವ್ಯಕ್ತಿಯ ಜೀವನದಲ್ಲಿ ಬದುಕುವ ಸಾಧ್ಯತೆಯನ್ನು ಇಲ್ಲವಾಗಿಸಿರುತ್ತದೆ. ಜನಪದರು ಕೂಲಿಯಿಂದ ದುಡಿದು ಬದುಕುವ ಅಳಿಯನನ್ನು ಗೆಲ್ಲಿಸುವ ಭಾಗವಾಗಿಯೇ ಈ ಕಥೆಯನ್ನು ಕಟ್ಟಿರುವರು. ಒಂದರ್ಥದಲ್ಲಿ ಕಥೆಗಳಲ್ಲಿ ಬಡವನು ಯಶಸ್ಸನ್ನು ಪಡೆಯುವುದು ಕಥೆ ಹೇಳುವವರ ಆಶೋತ್ತರವೂ ಆಗಿದೆ. ಅನೇಕ ಸಲ ಕಥೆ ಹೇಳುವ ಕಲಾವಿದರೂ ಕಥೆಯ ನಾಯಕರೂ ಹೀಗೆ ಆಶೋತ್ತರಗಳಲ್ಲಿ ಏಕೀಭವಿಸುವರು. ಜನಪದ ಕಥೆಗಳಲ್ಲಿ ಹೆಚ್ಚಾಗಿ ಬಡವರು, ಕೆಳವರ್ಗದವರು, ತಮ್ಮ ಜೀವನಾನುಭವಗಳನ್ನು ಮಾತ್ರ ವ್ಯಕ್ತಮಾಡುವುದಿಲ್ಲ. ತಮ್ಮ ಅತೃಪ್ತಿಯನ್ನು ಕನಸುಗಳನ್ನು ಕೂಡ ವ್ಯಕ್ತಮಾಡುವರು.

ಬಡವರಲ್ಲಿ ಹೆಚ್ಚಿನವರು ಸಾಮಾನ್ಯವಾಗಿ ಸಾಮಾಜಿಕ ಆರ್ಥಿಕ ವ್ಯವಸ್ಥೆಗೆ ಹೊಂದಿಕೊಂಡು ಬದುಕಲು ಯತ್ನಿಸುತ್ತಾರೆ. ಆದರೆ ಅವರಲ್ಲಿ ಕೆಲವರು ಪ್ರವಾಹದ ವಿರುದ್ಧ ಈಜಲು ಯತ್ನಿಸುತ್ತಾರೆ. ಅಂತಹವರು ತಮ್ಮ ಜೀವನದಲ್ಲಿ ಏನಾದರೂ ಸಾಧಿಸಿ ತೋರಿಸಿ ಸಮಾಜದ ಗಮನ ಸೆಳೆಯಲು ಯತ್ನಿಸುತ್ತಾರೆ. ಅಂತಹ ಯತ್ನಗಳಲ್ಲಿ ಅವರಲ್ಲಿ ಅನೇಕ ಉಪಾಯಗಾರಿಕೆಗಳು ಮೂಡುತ್ತವೆ. ಆದ್ದರಿಂದ ಅವರ ತಂತ್ರಗಾರಿಕೆಗಳು ಹುಟ್ಟುವುವುದಕ್ಕೆ ಕಾರಣ ಅವರ ವೈಯಕ್ತಿಕ ಪ್ರತಿಭೆ ಆಗಿರುವುದಿಲ್ಲ. ಬದಲಿಗೆ ಅವರ ಸಾಮಾಜಿಕ ಆರ್ಥಿಕ ಅಸಹಾಕಥೆಯಾಗಿರುತ್ತದೆ. ನಿಸರ್ಗದಲ್ಲಿರುವ ದುರ್ಬಲ ಪ್ರಾಣಿಗಳು ತಮ್ಮನ್ನು ತಿನ್ನಬಯಸುವ ಬಲಿಷ್ಠ ಪ್ರಾಣಿಗಳಿಂದ ಬದುಕಿ ಉಳಿಯಲು ನಾನಾ ಉಪಾಯಗಳನ್ನು ಹುಡುಕುತ್ತವೆ. ತನ್ನ ಮರಿಗಳನ್ನು ತಿನ್ನಲು ಬಲಿಷ್ಠ ಪ್ರಾಣಿ ಬಂದಾಗ ಕೆಲವು ಜಾತಿಯ ತಾಯಿಹಕ್ಕಿಗಳು ಸತ್ತುಬೀಳುವಂತೆ ಉರುಳಾಡುವ ನಾಟಕ ಮಾಡುತ್ತವೆ. ಇಂತಹ ನಾಟಕದ ಉಪಾಯವು ಹುಟ್ಟಿದ್ದು ಅಸ್ತಿತ್ವಕ್ಕಾಗಿ.

ಭಾರತವು ಅತಿ ಹೆಚ್ಚು ಬಡವರು ಇರುವ ಸಂಪತ್ತಿನ ಅಸಮಾನ ಹಂಚಿಕೆಯ ದೇಶ. ಇಂತಹ ದೇಶದಲ್ಲಿ ಬಡವರು ಶ್ರೀಮಂತರೆಂಬ ಎರಡು ವರ್ಗಗಳು ಅನೇಕ ಬಿಕ್ಕಟ್ಟುಗಳನ್ನು ನಿರ್ಮಿಸಿವೆ. ಸಿರಿವಂತರು ಬಡವರ ಶ್ರಮಿಕರ ಶ್ರಮದ ಶೋಷಣೆಯನ್ನು ಮಾಡುವುದಕ್ಕೆ ಅನೇಕ ಉಪಾಯ ಮಾಡುತ್ತಲೇ ಇರುತ್ತಾರೆ. ಇದಕ್ಕೆ ಪ್ರತಿಯಾಗಿ ಬಡವರು ತಮ್ಮ ಶ್ರಮದ

ಶೋಷಣೆ ತಪ್ಪಿಸಿಕೊಳ್ಳಲು ಪ್ರತಿ ಉಪಾಯಗಳನ್ನು ಮಾಡುತ್ತಲೇ ಇರುತ್ತಾರೆ. ಇದು ಉದ್ದಕ್ಕೂ ನಡೆದುಬಂದಿದೆ. ಕನ್ನಡ ಜನಪದ ಸಾಹಿತ್ಯವು ಭಾರತದ ಬಡವರ ಅಭಿವ್ಯಕ್ತಿಯಾಗಿದೆ. ಅದರಲ್ಲಿಯೂ ಜನಪದ ಕಥೆಗಳು ಈ ಬಡವರ ಬಾಳಿನ ಏರುಪೇರುಗಳನ್ನು ಕಷ್ಟಸುಖಗಳನ್ನು ಚೆನ್ನಾಗಿ ಪ್ರತಿಫಲಿಸುತ್ತವೆ. ಕನ್ನಡ ಜನಪದ ಕಥೆಗಳಲ್ಲಿ ಬಡವರೇ ಮುಖ್ಯ ಪಾತ್ರಧಾರಿಗಳು. ಒಂದೂರಲ್ಲಿ ಒಬ್ಬ ರಾಜನಿದ್ದ ಎಂದು ಕಥೆಗಳು ಆರಂಭವಾಗುವ ಹಾಗೆಯೇ ಒಂದೂರಲ್ಲಿ ಒಬ್ಬ ಬಡವ ಇದ್ದ ಎಂದೂ ಆರಂಭವಾಗುವುದನ್ನು ಗಮನಿಸಬಹುದು. ಇಂತಹ ಕಥೆಗಳಲ್ಲಿ ಬಡವರ ಉಪಾಯಗಾರಿಕೆಯೇ ಮುಖ್ಯ ಘಟನೆಗಳು. ವಿಶೇಷ ಸಂಗತಿಯೆಂದರೆ ಜನಪದ ಕಥೆಗಳಲ್ಲಿ ಉಪಾಯಗಾರಿಕೆ ಮಾಡುವವರು ಎಂದೂ ಸ್ಪರ್ಧೆಯಲ್ಲಿ ಯುದ್ಧದಲ್ಲಿ ಸಂಘರ್ಷದಲ್ಲಿ ಜೂಜಿನಲ್ಲಿ ಸೋಲದಿರುವುದು. ಅಂತಿಮವಾಗಿ ಅವರು ಗೆದ್ದು ಸುಖವಾಗಿ ಬಾಳುವ ಅರ್ಹತೆಯನ್ನು ಪಡೆದುಕೊಳ್ಳುವರು. ಇದು ಜನಪದ ಕಥೆಗಳ ಮೂಲಕ ಜನಪದರು ತಮ್ಮ ಲೋಕದೃಷ್ಟಿಯನ್ನು ಪ್ರಕಟಿಸುತ್ತಿರುವ ಬಗೆಯಾಗಿದೆ.

## ಅಧ್ಯಾಯ–೩

# ಮುದುಕರ ಉಪಾಯಗಾರಿಕೆ ಸ್ವರೂಪ

ಸಾಮಾನ್ಯವಾಗಿ ಭಾರತೀಯ ಕುಟುಂಬ ವ್ಯವಸ್ಥೆಯಲ್ಲಿ ವಯಸ್ಸಿನಲ್ಲಿ ಹಿರಿಯರಿಗೆ ಗೌರವಸ್ಥಾನ ಇದೆ. ಕಿರಿಯರು ವಿನಯತೆ, ವಿಧೆಯತೆ ತೋರಿಸುತ್ತಾರೆ. ಹಿರಿಯರ ಅನುಭವಕ್ಕೆ ಬೆಲೆ ಇದೆ. ಹಿರಿಯರು ದೈಹಿಕವಾಗಿ ದುರ್ಬಲವಾಗಿರುವುದರಿಂದ ಸಹಾನುಭೂತಿ ತೋರಿಸುತ್ತಾರೆ. ಹೀಗಾಗಿ ಹಿರಿಯರು ಸಮಾಜದ ಕುಟುಂಬ ವ್ಯವಸ್ಥೆಯಲ್ಲಿ ಒಂದು ಬಗೆಯ ಅಧಿಕಾರವನ್ನು ಇಟ್ಟುಕೊಂಡಿದ್ದಾರೆ.

ಆದರೆ ನಮ್ಮ ಸಮಾಜ ಕುಟುಂಬ ವ್ಯವಸ್ಥೆಯಲ್ಲಿ ಹಿರಿಯರು ಅಸಹಾಯಕಥೆಯನ್ನೂ ಅನುಭವಿಸುತ್ತಿದ್ದಾರೆ. ದೈಹಿಕ ಶಕ್ತಿಯಿಲ್ಲದ ಕಾರಣದಿಂದ ಅವರಿಗೆ ಉಳಿದವರ ಸಮಕ್ಕೆ ದುಡಿಮೆ ಮಾಡುವುದು ಸಾಧ್ಯವಾಗುವುದಿಲ್ಲ. ದುಡಿಮೆಯಿಲ್ಲದ ಕಾರಣದಿಂದ ಕುಟುಂಬದಲ್ಲಿ ಸದಸ್ಯರು ಸಮಾನ ಗೌರವ ಕೊಡುವುದಿಲ್ಲ. ನಿರ್ಲಕ್ಷ್ಯ ಮಾಡುತ್ತಾರೆ. ಸಾಮನ್ಯವಾಗಿ ಹಿರಿಯರು ಕಿರಿಯರಿಂದ ಹೆಚ್ಚು ಸೇವೆ ಆರೈಕೆ ಬೇಡುತ್ತಾರೆ. ಕುಳಿತಲ್ಲಿಯೇ ಆಹಾರ ಇವೆಲ್ಲ ಸೌಲಭ್ಯವನ್ನು ಒದಗಿಸಬೇಕೆಂದು ಅಪೇಕ್ಷಿಸುತ್ತಾರೆ. ಇಂತಹ ಸ್ಥಿತಿಯನ್ನು ಶ್ರೀಮಂತರು ಕೆಲಸದ ಆಳಿನಿಂದ, ಹಣ ನೀಡಿ ಆರೈಕೆಗೆ ಅನುಕೂಲ ಮಾಡಿ ಕೊಡುತ್ತಾರೆ. ಆದರೆ ಬಡವರಿಗೆ ಆರ್ಥಿಕ ಹೊರೆ ಬೀಳುತ್ತದೆ. ಅವರೂ ಕೂಲಿಗೆ ಹೋಗದಿದ್ದರೆ ಒಪ್ಪತ್ತಿನ ಹೊಟ್ಟೆ ತುಂಬುವುದಿಲ್ಲ. ಅದಕ್ಕಾಗಿ ಹಿರಿಯರನ್ನು ತಮ್ಮ ಅನುಕೂಲಕ್ಕೆ ತಕ್ಕಂತಹ ವ್ಯವಸ್ಥೆ ಮಾಡುತ್ತಾರೆ. ಇದರಿಂದಲೂ ಹಿರಿಯರ ಮತ್ತು ಕಿರಿಯರ ನಡುವೆ ಸಂಘರ್ಷ ಆರಂಭವಾಗುತ್ತದೆ.

ನಿಜವಾಗಿಯೂ ಸಂಘರ್ಷ ಶುರುವಾಗುವುದು ಅಭಿಪ್ರಾಯ ಭೇದದಿಂದ. ಸಾಮಾನ್ಯವಾಗಿ ಎಳೆಯ ತಲೆಮಾರಿನವರು ತಮ್ಮ ಸ್ವಾತಂತ್ರ್ಯ ಚಲಾಯಿಸುವುದಕ್ಕೆ ಹಿರಿಯರು ಒಂದು ಅಡ್ಡಿ ಎಂದು ಬಯಸುತ್ತಾರೆ. ಅತ್ತೆ–ಮಾವ, ತಂದೆ–ತಾಯಿ, ಹಿರಿಯ ಅಣ್ಣ ಅಕ್ಕ, ಇವರಿಂದ ಸೊಸೆ ಮಕ್ಕಳು ಈ ಬಗೆಯ ಆರೋಪವನ್ನು ಮಾಡುತ್ತಾರೆ. ಹೀಗಾಗಿ ಅವರು ಹಿರಿಯರನ್ನು ತಮ್ಮ

ಹಗೆಗಳು ಎಂದು ಭಾವಿಸುತ್ತಾರೆ. ಅವರ ಅಭಿಪ್ರಾಯಗಳನ್ನು ಉಲ್ಲಂಘಿಸಲು ತವಕಿಸುತ್ತಾರೆ. ಸಮಾಜದಲ್ಲಿ ಹಿರಿಯರನ್ನು ನಿರುಪಯುಕ್ತರಾದವರು ಎಂದೂ ಒಂದು ಹೊರೆಯೆಂದೂ ಭಾವಿಸುವವರು ಬಹಳ ಜನರು ಯುವ ಪೀಳಿಗೆಯಲ್ಲಿ ಕಾಣಸಿಗುತ್ತಾರೆ. ಕೆಲವರು ಇದನ್ನು ಬಾಯಿಬಿಟ್ಟು ಹೇಳದಿರಬಹುದು. ಆದರೆ ಆಳದಲ್ಲಿ ಅವರ ಅಸಮಾಧಾನಗಳು ಹೊಯ್ದಾಡುತ್ತಿರುತ್ತವೆ. ಹಿರಿಯರು ನಮನ್ನು ಚಿಕ್ಕ ಪ್ರಾಯದವರಿದ್ದಾಗ ತಮ್ಮ ಜೀವಕ್ಕಿಂತ ಹೆಚ್ಚು ಜೋಪಾನ ಮಾಡುತ್ತಾರೆ. ದುರಂತವೆಂದರೆ ಸಾಕಿ ಬೆಳೆಸಿ ಪೋಷಿಸಿದವರನ್ನು ಕಿರಿಯರು ತಮ್ಮ ಹಗೆಗಳಂತೆ ತಿಳಿಯುವುದು.

ಈ ಅಭಿಪ್ರಾಯ ರೂಪುಗೊಳ್ಳುವಂತೆ ಕೆಲವು ಹಿರಿಯರು ಕೂಡ ವರ್ತಿಸುವರು. ಅನೇಕ ಹಿರಿಯರು ಕಿರಿಯರಾದವರಿಗೆ ಸ್ವಂತ ಆಲೋಚನೆ ಅಭಿಪ್ರಾಯ ಇರುತ್ತದೆ ಎಂದೇ ನಂಬುವುದಿಲ್ಲ.. ಅವರಿಗೆ ವಯಸ್ಸು ಚಿಕ್ಕದಾಗಿರುವುದರಿಂದ ಅವರಿಗೆ ಅನುಭವವಿಲ್ಲವೆಂದೂ, ಅವರು ತಮ್ಮ ಅಭಿಪ್ರಾಯ ಕೇಳಬೇಕಾದವರು ಎಂದು ಹಿರಿಯರು ಭಾವಿಸುತ್ತಾರೆ. ತಮ್ಮ ಯಜಮಾನಿಕೆಯ ವಯಸ್ಸಿನ ಅಧಿಕಾರದಿಂದ ಅನಗತ್ಯವಾಗಿ ಕಿರಿಯರ ವೈಯಕ್ತಿಕ ಬಾಳಿನಲ್ಲಿ ಮೂಗು ತೂರಿಸುತ್ತಾರೆ. ಕೆಲವು ಸಾಮಾಜಿಕ ಸನ್ನಿವೇಶಗಳು ಹಿರಿಯರಾದವರ ದಾರುಣ ಬದುಕಿಗೆ ಕಾರಣವಾಗುತ್ತವೆ. ಅವು ಅನಾಥಪ್ರಜ್ಞೆಯಿಂದ ನರಳುವಂತೆ ಮಾಡುತ್ತವೆ. ಇಂತಹ ಸನ್ನಿವೇಶಗಳಿಂದ ಹಿರಿಯರು ಮಾನಸಿಕ ಖಿನ್ನರಾಗುವುದುಂಟು. ಆತ್ಮಸ್ಥೈರ್ಯ ಕಳೆದುಕೊಂಡು ಆತ್ಮಹತ್ಯೆ ಮಾಡಿಕೊಳ್ಳುವುದುಂಟು. ವೃದ್ಧಾಶ್ರಮ ಸೇರುವುದುಂಟು. ಈ ಕುರಿತ ವರದಿಗಳನ್ನು ಮಾಧ್ಯಮಗಳಲ್ಲಿ ಈಗಲೂ ನೋಡುತ್ತೇವೆ. ವೃದ್ಧಾಪ್ಯವು ಎರಡು ಬಗೆಯಲ್ಲಿ ಶಾಪಗ್ರಸ್ತವೆನಿಸುತ್ತದೆ. ಒಂದು ಸ್ವತಃ ದೇಹವೇ ಅವರಿಗೆ ಅಸಹಕಾರ ನೀಡಲು ಆರಂಭಿಸುತ್ತದೆ. ಎರಡು–ಅವರು ಬದುಕುವ ಸಮಾಜ ಅವರನ್ನು ನಿರ್ಲಕ್ಷ್ಯ ಮಾಡುತ್ತ ಮುಜುಗರ ಮಾಡಲು ಯತ್ನಿಸುತ್ತಿರುತ್ತದೆ.

ಆದರೆ ಈ ಬಗೆಯ ಬಿಕ್ಕಟ್ಟಿನ ಸ್ಥಿತಿಯೇ ವೃದ್ಧರಿಗೆ ಉಪಾಯಗಳನ್ನು ಹುಡುಕಿಕೊಳ್ಳುವುದಕ್ಕೆ ಕಾರಣವಾಗುತ್ತದೆ. ಅವರು ತಮ್ಮ ಅಸಹಾಯಕಥೆಯಿಂದ ತಮ್ಮ ಅಸ್ತಿತ್ವಕ್ಕೆ ಹೋರಾಟ ಮಾಡಲು ಯತ್ನಿಸುವರು. ಬದುಕುಳಿಯಲು ಆತ್ಮರಕ್ಷಣೆಗೆ ಹೊಸ ಹೊಸ ಹಾದಿಯನ್ನು ಹುಡುಕಿಕೊಳ್ಳುತ್ತಾರೆ. ಇದರ ಭಾಗವಾಗಿಯೇ ಅವರಲ್ಲಿ ಉಪಾಯಗಾರಿಕೆಗಳು ಹುಟ್ಟಿಕೊಳ್ಳುವುದು. ಅವುಗಳಲ್ಲಿ ಸಣ್ಣಪುಟ್ಟ ಸುಳ್ಳು ಹೇಳುವುದು ಸೇರಿದೆ. ಒಂದು ಜನಪದ ಕಥೆಯಲ್ಲಿ ಒಬ್ಬ ಮುದುಕನು ತನ್ನನ್ನು ಸೊಸೆ ಮಗ ಬಹಳ ನಿರ್ಲಕ್ಷ್ಯ ಮಾಡುವುದನ್ನು ಕಂಡು ಒಂದು, ಉಪಾಯ ಮಾಡುತ್ತಾನೆ. ತನ್ನಲ್ಲಿ ಅಡಗಿಸಿಟ್ಟ ಸಂಪತ್ತು ಇದೆ ಎಂದೂ ತನ್ನನ್ನು ಯಾರು ಚೆನ್ನಾಗಿ ಉಪಚರಿಸುವರೊ ಅವರಿಗೆ ಈ ಗುಟ್ಟನ್ನು ಸಾಯುವಾಗ ಬಿಟ್ಟುಕೊಡುತ್ತೇನೆಂದೂ ಹೇಳುತ್ತಾನೆ. ಅದನ್ನು ನಂಬಿದ ಸೊಸೆ ಮತ್ತು ಮಕ್ಕಳು ಆ ಮುದುಕನನ್ನು ಕೊನೆಯ ತನಕ ಚೆನ್ನಾಗಿ ನೋಡಿಕೊಂಡು ಮೋಸ ಹೋಗುತ್ತಾರೆ. ಇದೇ ರೀತಿಯಲ್ಲಿ ಸೊಸೆಯು ಅತ್ತೆಯ

ಹತ್ತಿರ ಸಂಪತ್ತಿದೆ ಎಂದು ಉಪಚಾರ ಮಾಡಿದ ಕಥೆಯೂ ಇದೆ. ಇನ್ನೊಂದು ಕಥೆಯಲ್ಲಿ ತನ್ನ ಹೆಂಡತಿಯ ಮಾತುಕೇಳಿ ತನ್ನನ್ನು ದ್ವೇಷಿಸುವ ಮಗನಿಗೆ ತಾಯಿಯೊಬ್ಬಳು ಉಪಾಯದಿಂದ ಬುದ್ಧಿಕಲಿಸುವ ಪ್ರಸಂಗವಿದೆ.

ವಯಸ್ಸಿನಲ್ಲಿ ಚಿಕ್ಕವರು, ಅಶಕ್ತರು, ಅಂಗವಿಕಲರು ಮಾಡುವ ಉಪಾಯಗಾರಿಕೆಗಿಂತ ವಯಸ್ಸಾದವರು ಮಾಡುವ ಉಪಾಯಗಾರಿಕೆಯಲ್ಲಿ ಕೆಲವು ವಿಶೇಷತೆಗಳಿವೆ. ಅಲ್ಲಿ ಅವರು ತಮ್ಮ ಸುದೀರ್ಘವಾದ ಅನುಭವ ಮತ್ತು ವಿವೇಕವನ್ನು ಬಳಸುವರು. ಈ ಅನುಭವದ ಬಳಕೆಯು ವಯಸ್ಸಾದ ಪ್ರಾಣಿಗಳ ಉಪಾಯಗಾರಿಕೆಯಲ್ಲೂ ಕಾಣಸಿಗುತ್ತದೆ. ಅದರಲ್ಲೂ ಜನಪದ ಕಥೆಗಳಲ್ಲಿ ಬರುವ ಒಂಟಿಬಾಳಿನ ಮುದುಕಿಯರು ತಮ್ಮ ಉಪಾಯಗಾರಿಕೆಗೆ ಹೆಸರಾದವರು. ಅವರು ರಾಜಕುಮಾರನಿಗೆ ರಾಜಕುಮಾರಿಯ ಭೇಟಿಗೆ ಹಲವು ಉಪಾಯಗಳನ್ನು ಹೇಳಿಕೊಡುವುದರಲ್ಲಿ ಪ್ರಸಿದ್ಧರು. ವೃದ್ಧರು ತಮ್ಮ ಚಾಣಾಕ್ಷ ಉಪಾಯಗಾರಿಕೆಯಿಂದ ಕುಟುಂಬ ಊರು ಹಾಗೂ ಸಮಾಜದಲ್ಲಿ ಗೆಲ್ಲುವುದರ ಹಿನ್ನೆಲೆಯಲ್ಲಿ ಕೆಲವು ಜನಪದ ಕಥೆಗಳ ವಿಶ್ಲೇಷಣೆ ಮಾಡಲು ಯತ್ನಿಸಲಾಗುವುದು.

ಅತ್ತೆ ಸೊಸೆಯರ ವಿರಸವು ಭಾರತೀಯ ಸಮಾಜದಲ್ಲಿ ಸಾಮಾನ್ಯ ಸಂಗತಿಯಾಗಿದೆ. ಮಾಸ್ತಿಯವರ 'ಮೊಸರಿನ ಮಂಗಮ್ಮ' ಕಥೆಯನ್ನು ಇಲ್ಲಿ ನೆನೆಯಬಹುದು. ಬಹಳಷ್ಟು ಜನಪ್ರಿಯ ಚಲನಚಿತ್ರಗಳಲ್ಲಿ ಕೂಡ ಈ ಸಂಘರ್ಷವು ಒಂದು ವಸ್ತುವಾಗಿದೆ. ಇದು ಸಾಹಿತ್ಯ ಸಿನಿಮಾಗಳಲ್ಲಿ ಮಾತ್ರವಲ್ಲ, ವಾಸ್ತವದಲ್ಲಿ ಈಗಲೂ ಇರುವ ಸಂಗತಿಯಾಗಿದೆ. ಜನಪದರಲ್ಲಿಯೂ ಅತ್ತೆಸೊಸೆಯಂದಿರ ಸಂಘರ್ಷಕ್ಕೆ ಸಂಬಂಧಿಸಿದ ಕಥೆಗಳು ಹೇರಳವಾಗಿವೆ. ದುಷ್ಟಸೊಸೆ ಅಥವಾ ದುಷ್ಟಅತ್ತೆಯರು ಮಾಡುವ ಹಂಚಿಕೆ ವಿಫಲವಾಗಿ ತಾವೇ ಅದಕ್ಕೆ ಬಲಿಯಾಗುವ ಘಟನೆಯನ್ನು ಈ ಹಿಂದೆ 'ಅತ್ತೆಸೊಸೆ' ಕಥೆಯಲ್ಲಿ ಚರ್ಚಿಸಲಾಗಿದೆ. ಅತ್ತೆ ಸೊಸೆಯರ ವಿರಸವು ಭಾರತೀಯ ಕುಟುಂಬ ವ್ಯವಸ್ಥೆಯಲ್ಲಿ ಇಷ್ಟು ವ್ಯಾಪಕವಾಗಿರಲು ಏನು ಕಾರಣ? ಈ ಕುರಿತು ಅಧ್ಯಯನ ನಡೆಯಬೇಕಿದೆ. ಸ್ತ್ರೀಪ್ರಧಾನ ಸಮಾಜದಲ್ಲಿ ಅತ್ತೆಸೊಸೆಯರ ಸಂಘರ್ಷವು ಬರುವುದು ಕಡಿಮೆ. ಅಲ್ಲಿ ಮನೆಯ ಮುಖ್ಯನಿರ್ಣಯಗಳನ್ನು ಕುಟುಂಬದ ಹಿರಿಯ ಮಹಿಳೆಯೇ ತೆಗೆದುಕೊಳ್ಳುವಳು. ಆದರೆ ಪುರುಷ ಪ್ರಧಾನ ಮೌಲ್ಯಗಳಿರುವ ಕುಟುಂಬ ವ್ಯವಸ್ಥೆಯಲ್ಲಿ ಮುಖ್ಯ ನಿರ್ಣಯಗಳನ್ನು ಮನೆಯ ಹಿರಿಯ ಗಂಡಸು ಇಲ್ಲವೆ ದುಡಿಯುವ ಗಂಡಸು ತೆಗೆದುಕೊಳ್ಳುವನು. ಅಡಿಗೆ ಮತ್ತು ಮನೆಗೆಲಸಕ್ಕೆ ಸೀಮಿತವಾಗಿರುವ ಮಹಿಳೆಯರಲ್ಲಿ ಒಂದು ಬಗೆಯ ಅವಲಂಬನ ಮನೋಭಾವ ಇರುತ್ತದೆ. ಹೀಗಾಗಿ ದುಡಿಯುವ ಮತ್ತು ಅಧಿಕಾರ ನಡೆಸುವ ಪುರುಷರ ಮೇಲೆ ಹಕ್ಕು ಸಾಧಿಸುವುದಕ್ಕೆ ಅವರು ಯತ್ನಿಸುವರು. ಈ ಯತ್ನದಲ್ಲಿ ಅವರು ಪೈಪೋಟಿ ನಡೆಸುವರು. ಇದುವೇ ಅವರಲ್ಲಿ ಸಂಘರ್ಷಕ್ಕೆ ಮತ್ತು ಮನಸ್ತಾಪಕ್ಕೆ ಕಾರಣವಾಗುವುದು. ಈ ಸಂಘರ್ಷಕ್ಕೆ ಇನ್ನೊಂದು ಕಾರಣವೆಂದರೆ, ಕೂಡುಕುಟುಂಬಗಳಲ್ಲಿ

ಹಿರಿಯರು ಕಿರಿಯರ ಆಶ್ರಯದಲ್ಲಿ ಇರಬೇಕಾಗುವುದು. ಹಿರಿಯರ ಸೇವೆಯನ್ನು ಮಾಡದೆ ಕಿರಿಯರು ನಿರ್ಲಕ್ಷ್ಯ ಮಾಡಿದರೆ, ಅಲ್ಲಿ ಬಿಕ್ಕಟ್ಟು ಶುರುವಾಗುವುದು. ಆಗ ವಯಸ್ಸಾದವರು ತಮ್ಮ ಅಸ್ತಿತ್ವಕ್ಕಾಗಿ ತಡಕಾಡುವ ಸನ್ನಿವೇಶ ಬರುವುದು.

'ಹಣಮಗೇರಿ ಹನುಮವ್ವ' ಎಂಬ ಜನಪದ ಕಥೆಯಲ್ಲಿ ಒಬ್ಬ ಮುದುಕಿಯಾದ ಅತ್ತೆಯು ಸೊರಗಿ ಒಣಕಲು ಕಡ್ಡಿಯಂತಾಗುತ್ತಾಳೆ. ಕಾರಣ, ಅವಳ ಸೊಸೆಯಂದಿರು ಅವಳಿಗೆ ಸರಿಯಾಗಿ ಉಪಚರಿಸುವುದಿಲ್ಲ. ಅವಳು ನೆರೆಮನೆಯ ತನ್ನ ಗೆಳತಿಯ ಬಳಿ ತನ್ನ ಸ್ಥಿತಿ ಹೇಳಿಕೊಳ್ಳುವಳು. ಅವಳು ಒಂದು ಉಪಾಯ ಹೇಳಿಕೊಡುವಳು. ಅದರಂತೆ ಮುದುಕಿಯು ತನ್ನ ಸೊಸೆಯಂದಿರ ಮುಂದೆ ಮಡಕೆಯ ಚೂರುಗಳಿಂದ ನಾಣ್ಯದ ರೂಪದಲ್ಲಿ ಬೋಕಿಗಳನ್ನು ಮಾಡಿ, ಅದನ್ನು ಹಮ್ಮಿಣಿಗೆ ಹಾಕಿ ಹಮ್ಮಿಣಿಯನ್ನು ಸೊಂಟಕ್ಕೆ ಕಟ್ಟಿಕೊಂಡು ಆಗಾಗ್ಗೆ ಅಲ್ಲಾಡಿಸುತ್ತ ಶಬ್ದ ಮಾಡುವಳು. ಈ ಶಬ್ದದಿಂದ ತಮ್ಮ ಅತ್ತೆಯು ಹಣ ಇಟ್ಟಿರಬಹುದು ಎಂದು ಊಹಿಸಿದ ಸೊಸೆಯಂದಿರು, ನಾಮುಂದು ತಾಮುಂದು ಎಂದು ಪೈಪೋಟಿಯಲ್ಲಿ ದಿನವೂ ಮುದುಕಿಯ ಕ್ಷೇಮವನ್ನು ವಿಚಾರಿಸುತ್ತ ಉಪಚರಿಸುತ್ತ ಕಾಳಜಿ ವಹಿಸತೊಡಗುವರು. ನಮ್ಮ ಅತ್ತೆಯ ಸಂಪತ್ತು ನಮಗಲ್ಲದೆ ಬೇರೆ ಯಾರಿಗೆ ಸಿಗುತ್ತದೆ ಎಂದು ಬಹಳ ಜೋರಾಗಿ ಉಪಚಾರ ಮಾಡುವರು. ಸೊಸೆಯಂದಿರ ಉಪಚಾರವನ್ನು ಪಡೆದು ಮುದುಕಿ ಸುಖವಾಗಿ ಬದುಕಿ ಒಂದು ದಿನ ತೀರಿಕೊಳ್ಳುವಳು. ಅವಳು ತನ್ನ ಸೊಂಟದಲ್ಲಿರುವುದನ್ನು ಯಾರಿಗೂ ತೋರಿಸಿರುವುದಿಲ್ಲ. ಅವಳು ಸತ್ತ ಕ್ಷಣದಲ್ಲಿಯೇ ಸೊಸೆಯಂದಿರು ರೊಕ್ಕದ ಹಮ್ಮಿಣಿಯನ್ನು ಒಯ್ದು ಮುಚ್ಚಿಡುವರು. ಅಂತಿಮ ಸಂಸ್ಕಾರಕ್ಕೆ ಬಂದ ಜನರಿಗೆ ಕಾಣುವಂತೆ ಅತ್ತೆಯ ಮೇಲೆ ಪ್ರೀತಿ ಇದೆ ಎಂದು ತೋರಿಸಲು ಅವರು ಅಳುವ ನಟನೆ ಮಾಡುವರು. 'ನೀ ಹ್ಯಾಂಗ ಸತ್ತಿ ಅತ್ತಿ, ನಾ ಹ್ಯಾಂಗ ಮಾಡ್ಲಿ' ಎಂದು ರೋದಿಸುವರು. ಅಷ್ಟರಲ್ಲಿ ಒಬ್ಬ ಸೊಸೆ ಮನೆಗೆ ಹೋಗಿ ಅತ್ತೆಯ ಹಮ್ಮಿಣಿ ತೆರೆದು ನೋಡುತ್ತಾಳೆ. ಅದರಲ್ಲಿ ಟೋಕಿಯ ತುಕಡಿಗಳಿದ್ದವು. ಅದನ್ನು ಅಲ್ಲಿಯೇ ಇಟ್ಟು, ಅತ್ತೆಯ ಶವದ ಮುಂದೆ ಬಂದು 'ಏ ಅತ್ತೀ ಹಂಚ' ಎಂದು ಅಳಲು ಆರಂಭಿಸಿದಳು.

ಶವ ಸಂಸ್ಕಾರದ ನಂತರ ಅತ್ತೆಯ ಹತ್ತಿರ ಹಂಚ ಇದ್ದವು ನಾ ಹೇಳಿದರೂ ನೀವು ಕೇಳಲಿಲ್ಲ ಎಂದು ಒಬ್ಬ ಸೊಸೆ ಅಂದರೆ, ಇನ್ನೊಬ್ಬಳು ರೊಕ್ಕವನ್ನು ತೆಗೆದು ನೀನು ಹಂಚಿನ ತುಂಡು ಹಾಕಿದ್ದೀಯಾ ಎಂದು ಆಪಾದನೆ ಮಾಡುತ್ತ ಜುಟ್ಟು ಹಿಡಿದು ಜಗಳವಾಡುವರು. ಅತ್ತೆಗೆ ವಯಸ್ಸಾಗಿ ಅವಳು ಶಕ್ತಿಹೀನಳಾಗಿದ್ದರೂ ಸಹ ಅವಳ ಸೇವೆಯನ್ನು ಮಾನವೀಯ ದೃಷ್ಟಿಯಿಂದ ಮಾಡದೆ ಸರಿಯಾಗಿ ಊಟ ನೀಡದೆ ಸತಾಯಿಸುತ್ತಿದ್ದ ಸೊಸೆಯಂದಿರು, ಹಣದ ಆಸೆಗಾಗಿ ಅತ್ತೆಗೆ ಉಪಚರಿಸುವ ಮೂಲಕ ತಮ್ಮ ಸ್ವಾರ್ಥವನ್ನು ತೋರುವರು. ಆದರೆ

ವಯಸ್ಸಾದ ಮುದುಕಿಯು ತನ್ನ ಸೊಸೆಯರ ಹಣದಾಸೆಯನ್ನು ಅರಿತು ಒಂದು ಸಣ್ಣ ನಾಟಕವನ್ನು ಮಾಡಿ ಸಾಯುವ ತನಕ ಸುಖದ ಬದುಕನ್ನು ಅನುಭವಿಸುವಳು.

ಅತ್ತೆ ಸೊಸೆಯರಿಗೆ ಸಂಬಂಧಿಸಿದ ಕಥೆಗಳು ಬಹುಶಃ ಭಾರತದ ಸಮಾಜಕ್ಕೇ ವಿಶಿಷ್ಟವಾದವು ಎನಿಸುತ್ತದೆ. ಅತ್ತೆ ಸೊಸೆಯರ ಈ ರೀತಿಯ ಸಂಘರ್ಷದ ಸಂಬಂಧಗಳು ಪಾಶ್ಚಿಮಾತ್ಯ ಸಮಾಜದಲ್ಲಿ ಇವೆಯೊ ಇಲ್ಲವೊ ತಿಳಿಯುವುದಿಲ್ಲ. ಆದರೆ ಭಾರತದಲ್ಲಿ ಸಿಗುವ ಅತ್ತೆಸೊಸೆಯಂದಿರ ಜಗಳದ ಕಥೆಗಳು ಇಲ್ಲಿ ಬಹು ಜನಪ್ರಿಯವಾಗಿವೆ. ಈ ಕಥೆಗಳಲ್ಲಿ ಸಾಮಾನ್ಯವಾಗಿ ಕಾಟಕೊಡುವ ಕೆಟ್ಟ ಅತ್ತೆಯರು ಇರುವ ಹಾಗೆಯೇ, ಪ್ರಾಯದ ಸೊಸೆಯಂದಿರಿಂದ ಕಷ್ಟಪಡುವ ಮತ್ತು ಅದರಿಂದ ಪಾರಾಗುವ ವಯಸ್ಸಾದ ಅತ್ತೆಯರೂ ಇರುವರು. ವಿಶೇಷವೆಂದರೆ, ಸೊಸೆಯಂದಿರ ಕಾಟಕ್ಕೆ ಬಳಲುವ ಮಾವಂದಿರ ಕಥೆಗಳು ಹೆಚ್ಚು ಇಲ್ಲದಿರುವುದು.

ವಯಸ್ಸಾದ ಮುದುಕಿಯರನ್ನು ಅವರ ಅನುಭವದ ಹಿನ್ನೆಲೆಯಿಂದ ಅರಮನೆಗಳಲ್ಲಿ ರಾಣಿಯರು ದಾಸಿಯರನ್ನಾಗಿ ಮಾಡಿಕೊಳ್ಳುವುದು ಒಂದು ಪದ್ಧತಿ. ಇಂತಹ ಮುದುಕಿಯರ ಕಥೆಗಳು ಜನಪದದಲ್ಲಿ ಸಾಕಷ್ಟು ಇವೆ. ಇಲ್ಲಿನ ಮುದುಕಿಯರಲ್ಲಿ ಅಸಹಾಯಕಥೆಯಿಂದ ನರಳುವವರೂ ಇದ್ದಾರೆ. ಕುತಂತ್ರ, ಮೋಸ, ಮಾಡುವವರೂ ಇದ್ದಾರೆ. ಆರ್ಥಿಕವಾಗಿ ಹಿಂದುಳಿದಿರುವ ಮುದುಕಿಯರು, ಯಾರು ಬಂಧುಗಳಿಲ್ಲದೆ ಅನಾಥರಾಗಿ ಒಂಟಿಯಾಗಿ ಇರುವ ಮುದುಕಿಯರು, ವಯಸ್ಸಾದ ಕಾರಣದಿಂದ ತಬ್ಬಲಿಗಳಾದ ಮುದುಕಿಯರು, ಹೀಗೆ ನಾನಾ ನಮೂನೆಯ ಮುದುಕಿಯರು ಇಲ್ಲಿ ಬರುವರು. ಈ ಹಿನ್ನೆಲೆಯಲ್ಲಿ ಈಗ 'ರಾಜಕುಮಾರಿಯ ಸಾಹಸ' ಕಥೆಯನ್ನು ಗಮನಿಸಬಹುದು.

ಈ ಕಥೆಯಲ್ಲಿ ಮಂತ್ರಿಯು ವಯಸ್ಸಿನಲ್ಲಿ ಚಿಕ್ಕವನಾದ ತನ್ನ ಮಗನಿಗೆ ವಯಸ್ಸಿನಲ್ಲಿ ಹಿರಿಯಳಾದ ರಾಜಕುಮಾರಿಯನ್ನು ತಂದುಕೊಳ್ಳುವುದಕ್ಕೆ ಫಿತೂರಿ ಮಾಡುತ್ತಾನೆ. ಆದರೆ ರಾಜಕುಮಾರಿಗೆ ಈ ಮೋಸದ ಮದುವೆಯಿಂದ ಒಬ್ಬ ಮುದುಕಿಯು ತಪ್ಪಿಸುವಳು. ರಾಜಕುಮಾರಿಯು ಮದುವೆಯಿಂದ ತಪ್ಪಿಸಿಕೊಂಡು ಅರಮನೆಯನ್ನು ಬಿಟ್ಟು ಓಡಿಹೋಗಿ ಮತ್ತೊಬ್ಬ ಹೂಗಾರ ಮುದುಕಿಯ ಮನೆಯಲ್ಲಿ ಆಶ್ರಯ ಪಡೆಯುವಳು. ಮುದುಕಿಯರು ಜನಪದ ಕಥೆಗಳಲ್ಲಿ ಅಗಲಿದ ರಾಜಕುಮಾರ ಅಥವಾ ರಾಜಕುಮಾರಿಗೆ ಅವರಿಗೆ ತಕ್ಕ ಜೋಡಿಯನ್ನು ಜೋಡಿಸುವ ಕೆಲಸವನ್ನು ಮಾಡುವ ಪಾತ್ರ ಮಾಡುವರು. ಇದೊಂದು ಬಗೆಯಲ್ಲಿ ಅಭಿಸಾರಿಕೆಯ ಕೆಲಸ. ಕೆಲವೊಮ್ಮೆ ಇವರು ಕುಂಟಲಗಿತ್ತಿಯ ಪಾತ್ರವನ್ನೂ ವಹಿಸುವರು. ಪತ್ತಾರ ಮಾಸ್ತರ 'ಸಂಗ್ಯಾಬಾಳ್ಯಾ' ನಾಟಕದಲ್ಲಿಯೂ ಪರವ್ವ ಎಂಬ ಒಬ್ಬ ಮುದುಕಿಯು ಸಂಗ್ಯಾ ಮತ್ತು ಗಂಗಿಯರ ಪ್ರೇಮ ಪ್ರಕರಣದಲ್ಲಿ ಮುಖ್ಯ ಪಾತ್ರ ವಹಿಸುವಳು. ಆದರೆ ಜನಪದ ಕಥೆಗಳಲ್ಲಿ ಬರುವ ಮುದುಕಿಯರು ಕುಂಟಲಗಿತ್ತಿಯರಿಗಿಂತ ಕೊಂಚ ಭಿನ್ನವಾದ ಪಾತ್ರ ವಹಿಸುವರು. ಇವರು ಅನಾಥರಾಗಿ ತಬ್ಬಲಿಗಳಾಗಿ ಬಂದ ರಾಜಕುಮಾರಿಯರಿಗೆ

ಆಶ್ರಯ ಕೊಡುವ ಮತ್ತು ಅವಳು ತನ್ನ ನಿಜವಾದ ಪ್ರಿಯಕರ ಇಲ್ಲವೇ ತಂದೆಯ ಮನೆ ಸೇರಿಕೊಳ್ಳುವ ಕಾರ್ಯದಲ್ಲಿ ಸಹಕಾರಿಯಾಗುವರು. ಕೆಲವು ಮುದುಕಿಯರು ತಮ್ಮ ಜೀವನಾಧಾರಕ್ಕಾಗಿ ಉಳ್ಳವರ ರಾಜರ ಪರವಾಗಿ ಕುತಂತ್ರ ರೂಪಿಸುವ ಮತ್ತು ರಾಜರಿಗೆ ಸಹಾಯಕಿಯಾಗಿ ಗೂಢಚಾರಿಣಿಯಾಗಿ ಕೆಲಸ ಮಾಡುವ ಪಾತ್ರ ನಿರ್ವಹಿಸುತ್ತಾರೆ. ಇದಕ್ಕಾಗಿ ಅವರಿಗೆ ಸಂಭಾವನೆ ಕೂಡ ದೊರಕುತ್ತದೆ. ಈ ಕಥೆಯಲ್ಲಿ ಎರಡೂ ಮಾದರಿಯ ಮುದುಕಿಯರಿದ್ದಾರೆ. ಒಬ್ಬಳು ಅಸಹಾಯಕರಿಗೆ ನೆರವಾಗುವ ಮುದುಕಿ. ಇನ್ನೊಬ್ಬಳು ದೊರೆಗಳಿಗೆ ಅಧಿಕಾರಸ್ತರಿಗೆ ಫಿತೂರಿಯಲ್ಲಿ ನೆರವಾಗುವ ಮುದುಕಿ. ಹಣ ಆಭರಣಗಳ ಆಸೆಗಾಗಿ ಮೋಸ ಮಾಡಲು ಯತ್ನಿಸುವ ಮುದುಕಿ. ಹೀಗೆ ಮೋಸದಿಂದ ಬಂದ ಸಂಪಾದನೆಯಿಂದ ಸಾಯುವವರೆಗೆ ಸುಖವಾಗಿರಬಹುದು ಎನ್ನುವ ಕಲ್ಪನೆಯ ಮುದುಕಿ. ನಂಬಿದವರ ಕತ್ತು ಕೊಯ್ಯುವ ಮುದುಕಿ. ಕೊಲೆಯ ಸಂಚನ್ನು ರೂಪಿಸುವ ಮುದುಕಿ.

ಹೀಗೆ ಎರಡೂ ಮಾದರಿಯ ಮುದುಕಿಯರು ಉಪಾಯಗಾರಿಕೆಯನ್ನು ಮಾಡುವರು. ಈ ಬಗೆಯ ಮುದುಕಿಯರ ಪಾತ್ರದ ಬಗ್ಗೆ ಚರ್ಚೆ ಮಾಡುತ್ತ ಸಂಧ್ಯಾರೆಡ್ಡಿಯವರು ಹೀಗೆ ವ್ಯಾಖ್ಯಾನಿಸುತ್ತಾರೆ.

"ಜನಪದ ಕಥೆಗಳ ಹೆಚ್ಚಾಗಿ ಮುದುಕಿಯರನ್ನು ಸಹಾಯ ಪಡೆಯುವುದು ಕುತಂತ್ರ, ಮೋಸ, ವಂಚನೆ, ಉಪಾಯಗಳನ್ನು ಮಾಡಿ ಅವರಿಗೆ ಅನುಕೂಲವಾಗುವ ಹಾಗೆ ಮಾಡಿ ತಮ್ಮ ಕಪಟದ ನಟನೆಯ ಮೂಲಕ ನೆಪ ಮಾಡುವ ಮೂಲಕ ಮೋಸ ಮಾಡುವ ಯತ್ನ ಮಾಡಿ ಉಪಾಯದಿಂದ ಕೆಲಸವನ್ನು ನಿರ್ವಹಿಸಿ ಅದರಿಂದ ಬಂದ ಹಣದಿಂದ ತಮ್ಮ ನಿತ್ಯ ಜೀವನವನ್ನು ರೂಪಿಸಿಕೊಳ್ಳುತ್ತಾರೆ."[೧]

ಜನಪದರು ಪೌರಾಣಿಕ ಕಥೆಗಳನ್ನು ಹೆಣೆದು, ಅದರಲ್ಲಿ ಮಾನವರು ದೇವತೆಗಳಿಗೆ ಸ್ಪರ್ಧೆ ಒಡ್ಡುವಂತಹ ಪ್ರಸಂಗಗಳನ್ನು ನಿರ್ಮಿಸಿರುವರು. ಒಂದು ಕಥೆಯಲ್ಲಿ ಶನಿ ಮತ್ತು ಲಕ್ಷ್ಮಿಯರು ಮುದುಕ ಮುದುಕಿಯರ ವೇಷವನ್ನು ಹಾಕಿಕೊಂಡು ಕಟ್ಟಿಗೆ ಮಾರುವ ಬಡವನನ್ನು ಪರೀಕ್ಷಿಸುವ ಪ್ರಸಂಗವಿದೆ. ಚಂಚಲ ಮನಸ್ಸಿನ ಲಕ್ಷ್ಮಿಯು ಮುದುಕಿಯಾಗಿ ಎಷ್ಟೇ ಸಂಪತ್ತು ನೀಡಿದರೂ ಅದು ಜನರಿಗೆ ದಕ್ಕವುದಿಲ್ಲ. ಕಾರಣ, ಜನರಿಗೆ ನಿತ್ಯದ ಊಟ ಮುಖ್ಯವಾಗುತ್ತದೆಯೇ ಹೊರತು ಅವಳು ಕೊಡುವ ಸಂಪತ್ತಾಗಿರುವುದಿಲ್ಲ. ಮುದುಕರು ಹಿರಿತನದ ಮತ್ತು ಅನುಭವದ ಸಂಕೇತಗಳು. ಅವರು ಆಡುವ ಮಾತು ಮಾಡುವ ಕೆಲಸ ಉಳಿದವರಿಗೆ ಅನುಕರಣೀಯ ಎಂಬ ಗ್ರಹಿಕೆಯಿದೆ. ಈ ಗ್ರಹಿಕೆಯಲ್ಲಿಯೇ ದೇವತೆಗಳು ವೃದ್ಧರ ಪಾತ್ರಗಳನ್ನು ಹಾಕುವರು ಎಂದು ಕಾಣುತ್ತದೆ. ಆದರೂ ಅದು ಪ್ರಭಾವ ಬೀರುವುದಿಲ್ಲ. ಮುದುಕಿಯ ರೂಪದ ಲಕ್ಷ್ಮಿಯ ಕುಟಿಲತೆಯನ್ನು ಬಡವನೂ ಅವನ ಹೆಂಡತಿಯೂ ಸೋಲಿಸುತ್ತಾರೆ.

ಮುದುಕಿಯರು ಹೇಗೆ ಉಪಾಯಗಾರಿಕೆಯಿಂದ ಜನರ ಗುಟ್ಟನ್ನು ಬಿಡಿಸುತ್ತಾರೆ ಎನ್ನುವುದನ್ನು ಜನಪದ ಕಥೆಗಳ ಮೇಲೆ ಸಂಶೋಧನೆ ಮಾಡುವ ಕೆ. ಸಂಧ್ಯಾರೆಡ್ಡಿಯವರು ಉಲ್ಲೇಖಿಸುವ ಒಂದು ದಕ್ಷಿಣಕರ್ನಾಟಕದ ಕಥೆಯ ಭಾಗ ಹೀಗಿದೆ:

"ಒಬ್ಬ ಮುಧ್ಕಿ, ಒಂದಾನೊಂದು ದಿವಸ ಈ ಹೊಳೆಕೆರೆಗೆ ತೋಪ್ಗೆ ಬಂದ್ಲು. ನೀರಾ ಮೇಲಿರುವ ಜನಾನು ಅರ್ಮನೇನು ನೋಡಿದ್ಲು. ನೋಡ್ಬುಟ್ಟವ್ಳು ತೊಪ್ಪೆಕುಕ್ಕೆ ಅತ್ಗೆ ಬಿಸಾಕ್ಬಿಟ್ಟು. ತಲೆ ಕೆದುರ್ಬಿಟ್ಟು ಅಳಕ್ಕೆ ಸುರುಮಾಡಿದ್ಲು. ತಾಯಿ ನನ್ಗೆ ಯಾರೂ ದಿಕ್ಕಿಲ್ಲ ಪರದೇಶಿ. ನನನ್ಕರ್ಕಂಡು ನನ್ಗೆ ಅನ್ನ ಕೊಟ್ಟು ಕಾಪಾಡಬೇಕು. ಅಷ್ಟು ಕೆಲ್ಸ ಮಾಡಿದ್ರೆ ನಿನ್ನ ಸೌಕರ್ಯ ನಾನ್ಮಾಡ್ತೀನಿ" ಅಂದ್ಲು. ಇವ್ಳು ಅವ್ರು ಯಾವ ವ್ಯಾಳೆಗೆ ನೀರ್ಕ್ಕಾಯ್ಸಬೇಕು ಅಂದಕೆ ಆವ್ಯಾಳೆಗೆ ನೀರ್ಕ್ಕಾಯ್ಸದು, ನೀರುಯ್ಯಾದು. ಅವ್ರ ಸೀರೆಗಳ್ನ ಹೊಳೆ ಒಳ್ಗೆ ಹೊಗಿಯಾದು. ಹಿಂಗೆನೆ ಒಂದೆರಡ್ಮೂರು ತಿಂಗ್ಳು ಮಾಡ್ಕಂಡಿದ್ಲು. ಮಾಡ್ಕಂಡಿದ್ದದವ್ಳು ಮುಧ್ಕಿ ತಗದ್ಲು 'ಏನ್ರಮ್ಮ ಈ ನೀರಿನ ಮೇಲೆ ಎಂಗಾಯ್ತು ಅರಮನೆ, ಯಾವ ಮಹಿಮೆಯಿಂದಾಯ್ತು. ಹೇಳ್ರಮ್ಮ ಅಂದ್ಲು. ಅವ್ಳು, 'ಅದೆಲ್ಲ ಗಂಡ್ಸರ ಕೆಲ್ಸ, ನಮ್ಗೆ ಯಾಕಮ್ಮ ಅದೆಲ್ಲ' ಅಂಗಂದು ಹೇಳಿದ್ಲು. ಅದ್ಕೆ ಅವ್ಳು ಏನೇಳಿದ್ಲು 'ಬಿಡು ಬಿಡಮ್ಮ ಇದ್ಯಾವ ಗಂಡ ಹೆಂಡ್ತೀರು, ಗಂಡ ಮಾಡಿದ್ದು ಹೆಂಡ್ತಿಗೆ ಗೊತ್ತಾಗ್ಬೇಕು. ಹಾಗಿಲ್ದೇ ಇದ್ಮೇಲೆ ಯಾವ ಗಂಡ ಹೆಂಡ್ತೀರಮ್ಮ ಅಂದ್ಲು. 'ಅಮ್ಮ ಅದು ದೊಡ್ಡ ವಿಸ್ಯ, ಅದನ್ನ ಕಟ್ಗಂಡು ನಮ್ಗೇನಮ್ಮ' ಅಂದ್ರೆ ಇವ್ಳು 'ನಾನೇನ್ಮಾಡೇನು ನಿಮ್ಮನೇಲಿ ಕೊಟ್ಟ ಅನ್ನ ತಿನ್ಕಂಡು ಬಿದ್ದಿರೋಳು ನಾನು, ಅದು ಯಾತ್ರಿಂದ ಆಗದೆ ಸ್ವಲ್ಪ ಹೇಳ್ರಮ್ಮ ನನಗೆ' ಅಂದ್ಲು. ಅವ್ಳು ಹಿಂಸೆ ತಡೀಲಾರ್ದೆ ಹೇಳ್ಬಿಟ್ರು. "ಯಾವ್ದೋ ಒಂದು ಉಂಗುರ ಇದ್ದದಂತೆ ಗಂಡಸತ್ರ. ಆ ಉಂಗ್ರದ ಮಹಿಮೆಯಿಂದ ಈ ಅರ್ಮನೆ ಆಯ್ತಂತೆ" "ನೋಡಿಯವ್ವ ಇಷ್ಟು ಮಾತ್ನ ಕೇಳಿ ಹೇಳೂದಕ್ಕೆ ನಮ್ಗೆ ಯಾಕೆ ಆ ವಿಷ್ಯ ಅಂತ ನೀವು ಬಹಳ ಬಿಗಿಯಾಗಿದ್ರಿ. ಇವಾಗ ನಾನ್ಕೇಳಿ ನಿಮ್ಮನ್ನೇನು ಮಾಡೇನು?" ಅಂದ್ಲು ಮುದುಕಿ"

ಹೈದರಾಬಾದ ಕರ್ನಾಟಕ ಭಾಗದ ಕಥೆಗಳಲ್ಲೂ ಗುಟ್ಟನ್ನು ಜನರಿಂದ ಉಪಾಯವಾಗಿ ಬಿಡಿಸುವ ಮುದುಕಿಯರು ಕಾಣಸಿಗುತ್ತಾರೆ. ಮೇಲ್ಕಾಣಿಸಿದ ಪ್ರಸಂಗಕ್ಕೆ ಸಂಧ್ಯಾರೆಡ್ಡಿಯವರು ಕೊಡುವ ವಿಶ್ಲೇಷಣೆ ಹೀಗಿದೆ: "ಆಕೆಯ ಮಾತಿನಲ್ಲಿ ವರ್ತನೆಯಲ್ಲಿ ಕುಹಕತನ ತುಂಬಿರುವುದನ್ನು ಕಥೆಗಾರ ಬಹು ಸಹಜವಾಗಿ ಸಮರ್ಥವಾಗಿ ಚಿತ್ರಿಸಿದ್ದಾನೆ. ಸಹಜವಾದ ಇಲ್ಲಿನ ಸಂಭಾಷಣೆ ಆಡುಮಾತಿನ ಬಾಗು ಬಳುಕುಗಳಿಂದ ಕೂಡಿ ಚಿರಪರಿಚಿತವಾದ ವಾತಾವರಣವನ್ನು ಮೂಡಿಸಲು ಸಹಾಯಕವಾಗಿದೆ. ಇಲ್ಲಿನ ನಡವಳಿಕೆ, ಮಾತುಕಥೆಗಳು ನಾವು ದಿನನಿತ್ಯ ಜನಸಾಮಾನ್ಯರ ನಡವಳಿಕೆಯಲ್ಲಿ ಕಾಣುವಂಥವೇ. ಇಂತಹುದೊಂದು ಅನುಭವವನ್ನು ಇಲ್ಲಿನ ಕಥೆಗಾರ ಕಥೆಯಲ್ಲಿ ಸಮರ್ಪಕವಾಗಿ ಬೆಸೆದಿದ್ದಾನೆ. ಜನಪದ ಕಥೆಗಾರನ ಕಲಾವಂತಿಕೆ ಮಿಂಚುವುದೇ

ಇಂತಹ ಸಂದರ್ಭಗಳಲ್ಲಿ. ಕೇಳುಗರ ಮೇಲೆ ಇಂತಹ ನಿರೂಪಣೆ ನೇರವಾದ ಪರಿಣಾಮ ಬೀರಬಲ್ಲದು. ಏಕೆಂದರೆ ಅವರೂ ಇಂತಹ ಜೀವನಕ್ಕೆ ಪರಿಚಿತರೇ ಆದ್ದರಿಂದ"[೨]

ಇದೇ ತರಹದ ಜಾಣ ಮತ್ತು ಕುತಂತ್ರದ ಮುದುಕಿಯರು ಹೈದರಾಬಾದ್ ಕರ್ನಾಟಕದ ಜನಪದ ಕಥೆಗಳಲ್ಲಿಯೂ ಕಾಣಸಿಗುವರು. 'ಬೇಡಿದ್ದು ಕೊಡುವ ಉಂಗುರ' ಕಥೆಯಲ್ಲಿ ಒಬ್ಬ ಮುದುಕಿಯು, ಬೇಡಿದ್ದು ಕೊಡುವ ಬಂಗಾರ ಉಂಗುರವಿದ್ದ ಮನೆಯಿಂದ ಉಂಗುರವನ್ನು ಲಪಟಾಯಿಸುವ ಪ್ರಸಂಗವಿದೆ. ಅದು ಹೀಗಿದೆ:

"ಗಂಡ ಮುಂಜಾಣಿಯಿಂದ ಸಂಜಿತನಕ ಅಂಗಡ್ಯಾಗೆ ಇರ್ತಿದ್ದ. ಮನಿಗೆ ಯಾರು ಬಂದಿದ್ದು ಹ್ವಾದಿದ್ದೂ ಆತಿದಿಲ್ಲ. ಆ ಮುದುಕಿ 'ತಂಗೀ ನಿನ್ನ ಗಂಡ ಇವೆಲ್ಲಾ ಹ್ಯಾಂಗ ಮಾಡ್ಯಾನ' ಅಂತ ಕೇಳಿದ್ಲು. ಆವಾಗ ರಾಜನ ಮಗಳು ಯಥಾರ್ಥ ಬುದ್ಧಿಯಿಂದ 'ಒಂದಿಷ್ಟು ನೆಲಾ ಸಾರಿಸ್ತಾನ. ಅದರ ಮ್ಯಾಲ ಒಂದು ತಂಬಿಗಿ ಇಟ್ಟು ಒಂದು ಉಂಗುರ ಅದಾ, ಅದು ಅದರ ಬಲ್ಲಿ ಇಟ್ಟು ಲೋಬಾನಹಾಕಿ ಬೇಡಿದ್ದು ಬಗಸ್ತಾನ, ಅದು ಆಗ್ತಾದ' ಅಂತ ಇದ್ದೀದು ಇದ್ದಂಗ ಹೇಳಿದ್ಲು. ಆವಾಗ ಮುದಕಿ 'ನೀನ ಏನರೆ ಮಾಡಿ ಆ ಉಂಗರ ನಿನ್ನ ಬಳ್ಳನ್ಯಾಗ ಇಟ್ಟಕೊಳ್ಳಾಂಗ ಮಾಡು' ಅಂದ್ಲು. ಅದಕ್ಕ ರಾಜಕುಮಾರಿ 'ಬೇಕಾದಷ್ಟು ಬೇಡೀನಿ ಕೇಳಿನಿ ಆದ್ರೂ ಕೊಟ್ಟಿಲ್ಲ. ಹ್ಯಾಂಗ ಮಾಡಬೇಕು?' ಅಂದ್ಲು. 'ನೀ ಏನೂ ಇಲ್ಲ. ನನಗ ಬೇಕೇ ಬೇಕು ಅಂತ ಹಟ ಹಿಡ್ದು ಕುಂತುಬಿಡು. ಅಂದ್ರ ಕುಡ್ತಾನ' ಅಂತ ಹೇಳಿ ಮುದಕಿ ಮನಿಗೆ ಹ್ವಾದ್ಲು."[೩]

ಈ ಕಥೆಯಲ್ಲಿಯೂ ಡಾ. ಸಂಧ್ಯಾರೆಡ್ಡಿಯವರು ಉಲ್ಲೇಖಿಸುವ ಕಥೆಯಲ್ಲಿರುವಂತೆ, ಜಾಣತನದ ಆದರೆ ಕೇಡಿಗ ಉದ್ದೇಶವುಳ್ಳ ಮುದುಕಿಯ ಸಹಜವಾದ ವರ್ತನೆ ಬಂದಿದೆ. ಈ ಬಗೆಯ ಮಾಟಗಾತಿ ಮುದುಕಿಯರು ಅಸಹಾಯತೆಯಿಂದ ಸೊಸೆಯಂದಿರಿಗೆ ಸುಳ್ಳು ಹೇಳುವ ಅತ್ತೆಯ ಮಾದರಿಗಿಂತ ಭಿನ್ನವಾದವರು.

ವೃದ್ಧರದು ಬಡತನದಂತೆ, ಅಂಗವಿಕಲರಂತೆ, ಶಾಪಗ್ರಸ್ತ ಸ್ಥಿತಿಯಾಗಿದೆ. ಜಾತಿ ಮತ ಬೇಧವಿಲ್ಲದೆ ಸಮಾಜದಲ್ಲಿ ಮುದುಕರು ಗೌರವ ಮತ್ತು ಅಸಹಾಯಕಥೆಗೆ ಒಳಗಾಗುವರು. ಹಿರಿಯರಾದವರು ಹೆಚ್ಚು ಜೀವನದಲ್ಲಿ ಅನುಭವ ಉಳ್ಳವರು ಅವರಲ್ಲಿ ವಿವೇಕ ಮತ್ತು ತಿಳುವಳಿಕೆ ಇದೆ ಎಂಬ ಕಾರಣಕ್ಕೆ ಸಮಾಜ ಅವರನ್ನು ಗೌರವಿಸುತ್ತದೆ. ಅವರ ದೈಹಿಕ ದುರ್ಬಲತೆ ಅನುಲಕ್ಷಿಸಿ ಅವರಿಗೆ ನೆರವಿನ ಹಸ್ತವನ್ನು ಚಾಚುತ್ತದೆ. ಆದರೆ ಇದೇ ಸಮಾಜವು ವಯಸ್ಸಾದವರನ್ನು ನಿರ್ಲಕ್ಷ್ಯ ಮತ್ತು ತಾತ್ಸರದಿಂದ ಕಾಣುತ್ತದೆ. ಅನೇಕ ಕುಟುಂಬ ವೃದ್ಧರ ಪರಿಸ್ಥಿತಿ ಶೋಚನೀಯವಾದದ್ದು. ದುಡಿಯಲಾಗದವರು ಮತ್ತು ಮತ್ತೊಬ್ಬರ ದುಡಿಮೆಯಲ್ಲಿ ಬದುಕಬೇಕೆಂಬ ಕಾರಣದಿಂದ ಅವರನ್ನು ಅಸಹಾಯಕಥೆಗೆ ತಳ್ಳಲಾಗಿದೆ. ಅವರ ಅಭಿಪ್ರಾಯಗಳಿಗೆ ಹೆಚ್ಚಿನ ಮನ್ನಣೆ ಇರುವುದಿಲ್ಲ. ಮಕ್ಕಳಿಂದ ತಂದೆ ತಾಯಿಯಂದಿರು, ಸೊಸೆಯಿಂದ ಅತ್ತೆ

ಮಾವಂದಿರು, ನಾನಾ ಬಗೆಯ ಅನಾಥರು ಕಿರುಕುಳ ಮತ್ತು ಹಿಂಸೆಗೆ ಒಳಗಾಗುವುದುಂಟು. ಇಂತಹ ದುರ್ಬಲ ಸನ್ನಿವೇಶವೇ ವೃದ್ಧರನ್ನು ಬಹಳ ಸಲ ಮನೆ ಬಿಟ್ಟು ಹೋಗುವಂತೆ ಮತ್ತು ಕೆಲವೊಮ್ಮೆ ಆತ್ಮಹತ್ಯೆ ಮಾಡಿಕೊಳ್ಳುವಂತೆ ಪ್ರೇರೇಪಿಸಿದೆ.

ಆದರೆ ಹೀಗೆ ಜೀವನದಿಂದ ಫಲಾಯನ ಮಾಡಿದ ಕೆಲವರು ಬದುಕಿ ಉಳಿಯಲು ನಾನಾ ಉಪಾಯಗಳನ್ನು ಹುಡುಕುತ್ತಾರೆ. ಕಳ್ಳರ ಗುಂಪನ್ನು ಮುದುಕಿಯೊಬ್ಬಳು ಉಪಾಯದಿಂದ ಅವರ ಮೂಗನ್ನು ಕತ್ತರಿಸಿ ರಾಜನಿಗೆ ಹಿಡಿದು ಕೊಡುವ ಪ್ರಸಿದ್ಧ ಕಥೆಯೂ ಭಾರತದ ತುಂಬ ಕಂಡುಬರುತ್ತದೆ ತನ್ನನ್ನು ನಿರ್ಲಕ್ಷ್ಯ ಮಾಡುವ ಸೊಸೆಗೆ ಅತ್ತೆಯೊಬ್ಬಳು ಉಪಾಯದಿಂದ ಸೋಲಿಸುವ ಕಥೆಗಳು ಕಂಡುಬರುತ್ತವೆ. ತಮ್ಮನ್ನು ನಿರ್ಲಕ್ಷ್ಯ ಮಾಡುವ ಮಕ್ಕಳಿಗೆ ಮುದಿ ತಂದೆ ತಾಯಿಗಳು ತಂತ್ರ ಹೂಡಿ ಬುದ್ಧಿಕಲಿಸುವ ಕಥೆಗಳು ಕೂಡ ಕನ್ನಡದಲ್ಲಿ ಇವೆ. ಇವೆಲ್ಲವೂ ವೃದ್ಧರ ಪರೋಕ್ಷ ಹೋರಾಟದ ಕಥೆಗಳೇ ಆಗಿವೆ.

## ಟಿಪ್ಪಣಿಗಳು

೧. ಕೆ.ಆರ್. ಸಂಧ್ಯಾರೆಡ್ಡಿ, ಕನ್ನಡ ಜನಪದ ಕಥೆಗಳು, ಪು.೧೨೧

೨. ಅದೇ, ಪು.೨೭೧

೩. ಜನಪದ ನೂರೆಂಟು ಕಥೆಗಳು, ಪು.೮೩

ಅಧ್ಯಾಯ-೪

# ಮಹಿಳೆಯರ ಉಪಾಯಗಾರಿಕೆಯ ಸ್ವರೂಪ

ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಶ್ರಮ ವಿಭಜನೆಯು ತಾತ್ವಿಕಥೆಯಿಂದ ಉದ್ಭವವಾದ ತಾರತಮ್ಯವು ಕುಟುಂಬ, ಶಿಕ್ಷಣ, ಧರ್ಮ, ಸಂಸ್ಕೃತಿ ಇನ್ನಿತರ ವಲಯಗಳಲ್ಲಿಯೂ ವಿಸ್ತರಿಸಿ ಬಿಟ್ಟಿದೆ. ಸಮಾಜವು ಮಾನವರಿಂದ ರಚಿಸಲ್ಪಟ್ಟ ಮೂಲಭೂತ ಪರಿಕಲ್ಪನೆಗಳಲ್ಲಿ ಸಾಮಾಜಿಕ ಸಂಸ್ಥೆಯು ಒಂದಾಗಿದೆ. ಕುಟುಂಬ, ಶಿಕ್ಷಣ, ಧರ್ಮ, ಸಂಸ್ಕೃತಿ, ರಾಜಕೀಯ, ಆರ್ಥಿಕ ಮಾಧ್ಯಮ ಇನ್ನಿತರ ಇವೆಲ್ಲವೂ ಸಾಮಾಜಿಕ ಸಂಸ್ಥೆಗಳಾಗಿದ್ದು, ಸಮಾಜ ವ್ಯಕ್ತಿಗಳ ಬೇಡಿಕೆಗಳ ಅವಶ್ಯಕಥೆಗಳನ್ನು ಈಡೇರಿಸುವ ಉದ್ದೇಶದಿಂದಾಗಿ ಸ್ಥಾಪಿಸಲ್ಪಟ್ಟವುಗಳಾಗಿವೆ. ಅವಶ್ಯಕವಾದ ಹಲವಾರು ಚಟುವಟಿಕೆಗಳನ್ನು ಸಂಘಟಿಸಿ ಅವುಗಳ ಮೂಲಕ ತಮ್ಮ ಉದ್ದೇಶಗಳನ್ನು ಈಡೇರಿಸಿಕೊಳ್ಳಲು ಅನುವು ಮಾಡಿಕೊಳ್ಳಲಾಗುತ್ತದೆ. ನಮ್ಮ ಮಹಿಳೆಯರಿಗೆ ತಾಯಿಯಸ್ಥಾನ ಮತ್ತು ದೇವತೆ ಎಂದೆಲ್ಲಾ ಆರಾಧಿಸುತ್ತೇವೆ ಎಂದು ಹೇಳಲಾಗುತ್ತದೆ. ಆದರೆ ಅವರನ್ನು ಅನೇಕ ಕಷ್ಟಕೋಟಲೆಗಳ ಬಂಧನದಲ್ಲಿರಿಸುವ ಪುರುಷವಾದಿ ವ್ಯವಸ್ಥೆಯು ಇದೆ. ಮಹಿಳೆಯರು ಅನಕ್ಷರತೆ, ಅನಾರೋಗ್ಯ, ಅಜ್ಞಾನ, ತುಂಬಿರುವಂಥ ಪರಿಸ್ಥಿತಿಗೆ ಬಲಿಯಾಗುತ್ತಿರುವವರು. ಶೇಕಡಾ ೫೦ ರಷ್ಟು ಮಹಿಳೆಯರಿರುವ ಭಾರತ ದೇಶದಲ್ಲಿ ಪುರುಷ ಪ್ರಧಾನ ವ್ಯವಸ್ಥೆಯಿಂದ ಸ್ತ್ರೀಶೋಷಣೆ ನಿರಂತರವಾಗಿ ನಡೆಯುತ್ತಿದೆ. ಹೆಣ್ಣನ್ನು ಈ ಭೂಮಿಗೆ ಹುಟ್ಟುವುದಕ್ಕೂ ಅನುವು ಮಾಡಿಕೊಡದ ಲಿಂಗವ್ಯವಸ್ಥೆಯ ಕ್ರೌರ್ಯವು, ಹುಟ್ಟಿದ ಹೆಣ್ಣನ್ನು ಘನತೆಯಿಂದ ಬದುಕಲು ಸಹ ಬಿಡುವುದಿಲ್ಲ. ಗಂಡು ಉತ್ತಮ ಹೆಣ್ಣು ಅಧಮ ಎಂಬ ಶ್ರೇಣೀಕರಣವು ಆಹಾರ, ಆರೋಗ್ಯ, ಬಟ್ಟೆ, ಶಿಕ್ಷಣಗಳ ಒದಗುವಿಕೆಯಲ್ಲಿಯು ತನ್ನ ತಲೆಯನ್ನು ತೂರಿಸುತ್ತದೆ. ಕುಟುಂಬದೊಳಗೆ ಲಿಂಗತಾರತಮ್ಯವು ತೀವ್ರಪ್ರಮಾಣದಲ್ಲಿ ಇರುತ್ತದೆ. ಸಾಮಾಜಿಕ ನಿರ್ಬಂಧನೆಗಳು ಅವಳ ಮೇಲೆ ವಿಧಿಸಿ ಮುಕ್ತವಾದ ಸ್ವಾತಂತ್ರ್ಯವನ್ನು ಕಿತ್ತುಕೊಳ್ಳಲಾಗಿದೆ.

ಆದರೆ ಇದು ಒಂದು ಮುಖದ ಚಿತ್ರಣ. ಇನ್ನೊಂದು ಮುಖದ ಚಿತ್ರಣದಲ್ಲಿ ಈ ಬಗೆಯ ತಾರತಮ್ಯದ ವಿರುದ್ಧ ನಿರಂತರವಾಗಿ ಸಂಘರ್ಷ ಮಾಡಿಕೊಂಡು ಬಂದಿರುವ ವಾಸ್ತವವೂ ಇದೆ. ೧೨ನೇ ಶತಮಾನದಲ್ಲಿ ಅಕ್ಕಮಹಾದೇವಿಯು ತನ್ನ ಮೇಲೆ ನಿಬಂಧ ವಿಧಿಸುತ್ತಿದ್ದ ಕುಟುಂಬವನ್ನು ಗಂಡನನ್ನು ಬಿಟ್ಟು ಹೊರಗೆ ಬಂದಪ್ರಸಂಗವು ನಮಗೆಲ್ಲ ತಿಳಿದೇ ಇದೆ. ಅಕ್ಕಮಹಾದೇವಿ ಕಲ್ಯಾಣದ ಅನುಭವ ಮಂಟಪದಲ್ಲಿ ಕೂಡ ಮಹಿಳೆಯನ್ನು ನೋಡುವ ಪುರುಷ ದೃಷ್ಟಿಕೋನದ ವಿರುದ್ಧ ಪ್ರತಿಭಟಿಸುವ ಪ್ರಸಂಗಗಳಿವೆ.

ಈ ಹಿನ್ನೆಲೆಯಲ್ಲಿ ಮಹಿಳೆಯರು ಜನಪದ ಕಥೆಗಳಲ್ಲಿ ಹೇಗೆ ತಮ್ಮ ಮೇಲೆ ಆಗುವ ಅನ್ಯಾಯವನ್ನು ಪ್ರತಿರೋಧಿಸುತ್ತಾರೆ, ಎದುರಿಸುತ್ತಾರೆ, ಪಾರಾಗುತ್ತಾರೆ ಎಂಬುದು ಕುತೂಹಲಕರ ಸಂಗತಿಯಾಗಿದೆ. ಇಲ್ಲಿ ಬಡಕುಟುಂಬದ ಮಹಿಳೆಯರನ್ನು ಉಳ್ಳವರು ಬಲಿಷ್ಠರು ಕಾಮಕ್ಕಾಗಿ ಪ್ರಚೋದಿಸುವ ಪ್ರಸಂಗಗಳಿದ್ದು ಅದರಿಂದ ಅವರು ಪಾರಾಗುವ ಪ್ರಸಂಗವುಳ್ಳ ಕಥೆಗಳಿವೆ. ಸೊಸೆಯಂದಿರ ತಾತ್ಸಾರ ಮತ್ತು ಕಾಟದಿಂದ ಬೇಸತ್ತ ಅತ್ತೆಯಂದಿರುವ ಅವರಿಗೆ ಉಪಾಯಗಾರಿಕೆಯ ಮೂಲಕ ಬುದ್ಧಿಕಲಿಸುವ ಮತ್ತು ಸುಖವಾಗಿ ಜೀವನ ಮಾಡುವ ಕಥೆಗಳಿವೆ. ದಡ್ಡ ಗಂಡಂದಿರು ಮೋಸ ಹೋಗುವಾಗ, ಅವರನ್ನು ತಮ್ಮ ಚಾತುರ್ಯದಿಂದ ಪಾರುಗಾಣಿಸುವ ಜಾಣ ಮಡದಿಯರ ಕಥೆಗಳಿವೆ. ರಾಜನೊ ಮಂತ್ರಿಯೊ ತನ್ನ ರಾಜಕೀಯ ವೈರಿಗಳಿಂದ ಕಷ್ಟಕ್ಕೆ ಸಿಲುಕಿಕೊಂಡಾಗ, ಬಿಡಿಸಲಾರದ ಒಗಟನ್ನು ಬಿಡಿಸುವ ಸವಾಲಿಗೆ ಸಿಲುಕಿಕೊಂಡಾಗ, ಅವರನ್ನು ತಮ್ಮ ಬುದ್ಧಿವಂತಿಕೆಯಿಂದ ಪಾರುಮಾಡುವ ಮಗಳಂದಿರ ಕಥೆಗಳಿವೆ. ಬಹಳ ಮುಖ್ಯವಾಗಿ ಅನಾಥರಾಗಿ ರಾಜ್ಯಭ್ರಷ್ಟರಾಗಿ ಅಲೆಯುವ ರಾಜಕುಮಾರರಿಗೆ ಅವರಿಗೆ ತಕ್ಕ ರಾಜಕುಮಾರಿಯ ಜತೆ ಪ್ರೇಮಸಂಬಂಧವಾಗುವಂತೆ ಮಾಡಿ, ಮದುವೆ ಮಾಡಿಸುವ ಜಾಣ ಮುದುಕಿಯರ ಕಥೆಗಳಿವೆ. ತಮ್ಮ ಕುಟಿಲ ಬುದ್ಧಿಯಿಂದ ಇನ್ನೊಬ್ಬರ ಸಂಪತ್ತಿಗೆ ಕಾರಣವಾಗಿರುವ ಚಿದಂಬರ ರಹಸ್ಯವನ್ನು ಅರಿತು, ಅದನ್ನು ಮತ್ತೊಬ್ಬರಿಗೆ ತಿಳಿಸಿ ಬಹುಮಾನ ಪಡೆಯುವ ಬೇಹುಗಾರ ಮುದುಕಿಯರ ಕಥೆಗಳಿವೆ.

ಹೀಗೆ ಜನಪದ ಕಥೆಗಳಲ್ಲಿ ಮಹಿಳೆಯರು ಕೇವಲ ಅಬಲೆಯರಲ್ಲ. ಅವರು ಶಕ್ತರೂ ಹೌದು. ಅವರು ಕಷ್ಟಕ್ಕೆ ಈಡಾಗುವವರು ಮಾತ್ರವಲ್ಲ. ಕಷ್ಟವನ್ನು ಕೊಡುವವರೂ ಹೌದು. ಕಷ್ಟಕ್ಕೆ ಈಡಾದವರು ಮಾಡುವ ಬಗೆಬಗೆಯ ಪ್ರತಿಭಟನೆಯ ವಿಧಾನಗಳು ಇಲ್ಲಿ ಚಿತ್ರಣಗೊಂಡಿವೆ. ಕಷ್ಟಕ್ಕೆ ಸಿಲುಕಿದವರು ನಾನಾ ತಂತ್ರಗಾರಿಕೆಯ ಮೂಲಕ ಅವುಗಳಿಂದ ಹೊರಬರುವ ಚಿತ್ರಣಗಳಿವೆ. ಮತ್ತೊಬ್ಬರಿಗೆ ಕೇಡನ್ನು ಬಯಸುವ ಮಹಿಳೆಯರ ಚಿತ್ರಣಗಳೂ ಇವೆ. ಈ ಅಧ್ಯಾಯದಲ್ಲಿ ಕೆಲವು ಆಯ್ದ ಜನಪದ ಕಥೆಗಳ ಮೂಲಕ ಮೇಲ್ಕಾಣಿಸಿದ ಆಶಯಗಳು ಹೇಗೆ ಕಾಣಿಸಿಕೊಳ್ಳುತ್ತವೆ ಎಂಬುದನ್ನು ವಿಶ್ಲೇಷಿಸಲು ಯತ್ನಿಸಬಹುದು.

'ಶಿವನ ಮಗಳು ಸೀತಾದೇವಿ' ಕಥೆಯು ತಾಯಿಯೊಬ್ಬಳು ತನ್ನ ಮಕ್ಕಳನ್ನು ಉಳಿಸಲು ಉಪಾಯಗಾರಿಕೆ ಮಾಡುವ ಆಶಯವನ್ನು ಒಳಗೊಂಡಿದೆ. ಈ ಕಥೆಯಲ್ಲಿ ಒಬ್ಬ ರಾಜನು ತನ್ನ ನಾಲ್ಕು ಜನ ಗಂಡು ಮಕ್ಕಳಿಗೆ ಮದುವೆಯ ಪ್ರಸ್ತಾಪ ಮಾಡುತ್ತಾನೆ. ಆದರೆ ಕೊನೆಯ ಮಗನು ಮಾತ್ರ ಅಪ್ಪನ ಪ್ರಸ್ತಾಪ ಒಪ್ಪದೆ ದೈವಿಕ ಶಕ್ತಿಯುಳ್ಳ ಮಹಿಳೆಯನ್ನೇ ಮದುವೆಯಾಗುತ್ತೇನೆ ಎಂದು ಹಠ ಹಿಡಿಯುತ್ತಾನೆ. ಆಗ ಸಿಟ್ಟಾದ ತಂದೆಯು ಇದು ಸಾಧ್ಯವಿಲ್ಲವೆಂದೂ ತನ್ನ ಮಾತನ್ನು ಕೇಳದ ಮಗನ ತಲೆಯನ್ನು ಒಡೆಯಲು ಚಂಡಾಲರನ್ನು ಕರೆಯಿಸಿ ಅಪ್ಪಣೆ ಕೊಡುವನು. ತನ್ನ ಮಗನ ಇಚ್ಛೆಯನ್ನು ಪೂರೈಸಬೇಕಾಗಿದ್ದ ತಂದೆ ಮಗನನ್ನು ಕೊಲ್ಲಲು ನಿರ್ಧರಿಸುವ ಪ್ರಸಂಗವು ಮನಕಲಕುತ್ತದೆ. ಆದರೆ ತಾಯಿಯು ಮಗನನ್ನು ಉಳಿಸಿಲು ಉಪಾಯ ಹೂಡುವಲು. ಅವಳು ವಜ್ರ ಮುತ್ತು ರತ್ನ ಹಾಕಿದ ಬುತ್ತಿಯನ್ನು ಕಟ್ಟಿ ಮಗನಿಗೆ ಕೊಡುತ್ತಾಳೆ. ಚಂಡಾಲರು ರಾಜನ ಮಗನಲ್ಲಿದ್ದ ಸಂಪತ್ತನ್ನು ಪಡೆದು ಮಗನನ್ನು ಕೊಲ್ಲದೆ ಬಿಡಬೇಕೆಂಬುದು ಅವಳ ಉದ್ದೇಶವಾಗಿರುತ್ತದೆ. ದಾರಿಯಲ್ಲಿ ರಾಜನ ಮಗನೂ ಚಂಡಾಲರೂ ಬುತ್ತಿಯನ್ನು ಬಿಚ್ಚಿ ಬಾವಿಯ ಪಕ್ಕದಲ್ಲಿ ಊಟಕ್ಕೆ ಕೂರುವರು. ರಾತ್ರಿಯ ಕತ್ತಲಲ್ಲಿ ಬುತ್ತಿಯಲ್ಲಿದ್ದ ವಜ್ರ ವೈಡೂರ್ಯಗಳು ಹೊಳೆಯುತ್ತವೆ. ಇದನ್ನು ಕಂಡ ಚಂಡಾಲರು ನಾವು ಇಷ್ಟು ಹಣ ಒಡವೆನ್ನು ಸಾಯುವ ತನಕ ದುಡಿದರೂ ಸಂಪಾದನೆ ಮಾಡುವುದಿಲ್ಲವೆಂದು ತಿಳಿದು ರಾಜನ ಮಗನನ್ನು ಕೊಲ್ಲದೆ ಬಿಡುಗಡೆಗೊಳಿಸುತ್ತಾರೆ. ರಾಜನಿಗೆ ಬೆಕ್ಕನ್ನು ಕೊಂದು ಅದರ ರಕ್ತವನ್ನು ತಂದು ತೋರಿಸುತ್ತಾರೆ.

ಪ್ರಾಮಾಣಿಕರಾದ ಕಥಾ ನಾಯಕರು ಕಷ್ಟ ಕಾಲದಲ್ಲಿದ್ದಾಗ ದೇವರು ಸಹಾಯಕ್ಕೆ ಬರುವುದು ಜನಪದ ಕಥೆಗಳಲ್ಲಿ ಸಾಮಾನ್ಯ ಸಂಗತಿ. ಅದರಂತೆ ದೇವಿಯ ಸೇವೆ ಮಾಡುತ್ತಿದ್ದ ರಾಜಕುಮಾರನಿಗೆ ದಕ್ಷಿಣ ದಿಕ್ಕಿಗೆ ಹೋಗಬೇಡ ಎಂದು ದೇವಿ ಎಚ್ಚರಿಕೆ ನೀಡಿರುತ್ತಾಳೆ. ದಕ್ಷಿಣ ದಿಕ್ಕಿಗೆ ತಲೆಯನ್ನು ಮಾಡಿ ಮಲಗಬಾರದು ಆ ದಿಕ್ಕಿಗೆ ರಾಕ್ಷಸಿ ಇರುತ್ತದೆ ಎನ್ನುವಂತಹ ನಂಬಿಕೆ ಜನಪದರಲ್ಲಿ ಈಗಲೂ ಇದೆ. ಆದರೆ ರಾಜಕುಮಾರನು ದಕ್ಷಿಣ ದಿಕ್ಕಿಗೆ ಹೋಗಬೇಡವೆಂದು ಯಾಕೆ ಹೇಳಿದಳು ಎಂದು ಕುತೂಹಲಕ್ಕಾಗಿ ನೋಡಲು ಹೋಗುತ್ತಾನೆ. ಅಲ್ಲಿ ಕೈಲಾಸದಿಂದ ಪರಮೇಶ್ವರನ ಮಗಳು ಸೀತಾದೇವಿ ಜಳಕಕ್ಕೆ ಬಂದಿರುತ್ತಾಳೆ. ರಾಜಕುಮಾರನು ಸೀತಾದೇವಿಯ ಸೀರೆಯನ್ನು ಕದ್ದು ಒಯ್ಯುತ್ತಾನೆ. ತನ್ನ ಭಕ್ತನಾದ ರಾಜಕುಮಾರನ ಕೈಯಲ್ಲಿದ್ದ ಕೆಂಪು ಸೀರೆಯನ್ನು ನೋಡಿ ಕಾಳಿಕಾದೇವಿ ಗಾಬರಿಯಾಗುತ್ತಾಳೆ. ಸೀತಾದೇವಿಯು ತನ್ನ ಸೀರೆ ಕದ್ದ ರಾಜಕುಮಾರನ ಬೆನ್ನಟ್ಟಿ ಗುಡಿಗೆ ಬಂದು ಮಾನ ಮುಚ್ಚುಕೊಳ್ಳಲಿಕ್ಕೆ ಅರಿವೆ ಕೊಡು ಎನ್ನುತ್ತಾಳೆ. ಆಗ ರಾಜಕುಮಾರನನ್ನು ಮದುವೆಯಾಗಲು ಒಪ್ಪಿದರೆ ಮಾತ್ರ ಸೀರೆಕೊಡುವೆ ಎನ್ನುವ ಕರಾರನ್ನು ಕಾಳಿಕಾದೇವಿ ಹಾಕುತ್ತಾಳೆ. ಅದಕ್ಕೆ ಸೀತಾದೇವಿ ಸಮ್ಮತಿಸುತ್ತಾಳೆ. ಆಗ ಕಾಳಿಕಾದೇವಿಯು ತಾನು ಅಡಗಿಸಿಟ್ಟಿದ್ದ ರಾಜಕುಮಾರನನ್ನು ಹೊರತಂದು ಅವನ ತೊಡೆ

ಸೀಳಿ ಅದರೊಳಗೆ ಸೀರೆಯನ್ನಿಟ್ಟು ಇಬ್ಬರಿಗೂ ಮದುವೆ ಮಾಡಿದಳು. ಈ ಸೀರೆ ಸಿಕ್ಕರೆ ಸೀತಾದೇವಿ ಕೈಲಾಸಕ್ಕೆ ಹಾರಿಹೋಗುವಳು ಎಂಬುದು ಕಾಳಿಕಾದೇವಿ ಮಾಡಿದ ಉಪಾಯವಾಗಿದೆ. ಇಲ್ಲಿ ಉಪಾಯ ಮಾಡುವುದು ಮಹಿಳೆಯಾದರೂ ಆಕೆ ದೇವತೆ ಎನ್ನುವುದು ಗಮನಾರ್ಹ. ಇಲ್ಲಿ ಸ್ತ್ರೀದೇವತೆ ಉಪಾಯ ಮಾಡುವುದು ತನ್ನ ಭಕ್ತನ ಆಸೆಯನ್ನು ಈಡೇರಿಸುವುದಕ್ಕಾಗಿ. ಸ್ವತಃ ದೇವತೆಯಾಗಿದ್ದರೂ ದೇವಲೋಕದ ಹೆಣ್ಣನ್ನು ನರಲೋಕದ ಮನುಷ್ಯರಿಗೆ ಕೂಡಿಸಲು ಆಕೆ ಈ ಉಪಾಯ ಮಾಡುವಳು. ತಮ್ಮ ಅನುಗ್ರಹ ಮತ್ತು ಶಾಪಶಕ್ತಿಯಿಂದ ಏನೆಲ್ಲವನ್ನು ಮಾಡಬಲ್ಲ ದೇವತೆಗಳು ಸಹ ಮನುಷ್ಯರ ಹಾಗೆ ಉಪಾಯಗಳ ಮೊರೆಹೋಗುವುದು ಇಲ್ಲಿ ಮಾರ್ಮಿಕವಾಗಿದೆ. ರಾಜಕುಮಾರನ ಬದುಕನ್ನು ಅವನ ಸ್ವಂತತಾಯಿ ಹಾಗೂ ದೇವಿಯ ರೂಪದಲ್ಲಿರುವ ಕಾಳಿಕಾಮಾತೆ ಹೀಗೆ ಎರಡು ತಾಯಂದಿರು ಸೇರಿ ಉಪಾಯಗಳ ಮೂಲಕ ಕಟ್ಟುವರು. ಇಲ್ಲಿನ ಉಪಾಯಗಳ ಅವರ ಸ್ವಂತ ರಕ್ಷಣೆಗಾಗಿ ಹುಟ್ಟಿದವಲ್ಲ. ತಮ್ಮ ಮಗನನ್ನು ಭಕ್ತನನ್ನು ಉಳಿಸಲು ಹುಟ್ಟಿದವು. ಸೊಸೆಯಂದಿರು ಮಾಡುವ ಉಪಾಯಗಳು ಸ್ವಯಂ ಅಸ್ತಿತ್ವಕ್ಕಾಗಿ ಬಂದರೆ, ತಾಯಂದಿರು ಮಾಡುವ ಉಪಾಯಗಳು ತಮ್ಮ ಮಕ್ಕಳ ಭವಿಷ್ಯವನ್ನು ಉಳಿಸಲು ಬರುತ್ತವೆ.

ಮುಂದೆ ರಾಜಕುಮಾರನು ಹೊಸ ಊರಿಗೆ ಬಂದು ಕುದುರೆಯನ್ನು ಬಾವಿಯ ಮೇಲಿಂದ ಹಾರಿಸಿ ಸಾಹಸ ಮಾಡಿ, ಅಲ್ಲಿದ್ದ ರತ್ನಾದೇವಿಯನ್ನು ಮದುವೆಯಾಗುವನು. ಮುಂದೆ ಇನ್ನೊಂದು ಶಹರಕ್ಕೆ ನೌಕರಿಗಾಗಿ ಬರುವನು. ಅವನ ಸುಂದರಿಯರಾದ ಹೆಂಡತಿಯರನ್ನು ಕಂಡು ಅಲ್ಲಿದ್ದ ಪ್ರಧಾನಿ ಮತ್ತು ರಾಜರು, ರಾಜಕುಮಾರನ್ನು ಕೊಂದು ಇಬ್ಬರು ಹೆಣ್ಣು ಮಕ್ಕಳನ್ನು ವಶಪಡಿಸಿಕೊಳ್ಳಲು ಉಪಾಯ ಹೂಡುವರು. ಇದಕ್ಕಾಗಿ ಹಾವಿನ ವಿಷವನ್ನು ತರಲು ರಾಜಕುಮಾರನಿಗೆ ನೇಮಿಸುವರು. ರಾಕ್ಷಸಿಯ ತಲೆಮಣಿಯನ್ನು ತರಲು ನೇಮಿಸುವರು. ಇದರ ಹಿಂದಿನ ತಂತ್ರವು ತನ್ನ ಗಂಡನನ್ನು ಕೊಲ್ಲುವುದೇ ಆಗಿದೆ ಎಂದು ರಾಜಕುಮಾರನ ಹೆಂಡತಿಯಾದ ಸೀತಾದೇವಿಗೆ ತಿಳಿಯುತ್ತದೆ. ಅದಕ್ಕಾಗಿ ಅವಳು ರಾಜ ಪ್ರಧಾನಿ ಮಾಡಿದ ಕುತಂತ್ರಕ್ಕೆ ಪ್ರತಿತಂತ್ರದ ಉಪಾಯವನ್ನು ಮಾಡಿ ತನ್ನ ಗಂಡನನ್ನು ಸಂಕಷ್ಟದಿಂದ ಪಾರುಮಾಡಲು ಯತ್ನಿಸುವಳು.

ಸೀತಾದೇವಿಯು ಮಂತ್ರಿಸಿದ ಹರಳನ್ನು ಕೊಟ್ಟು ನಾಗರ ವಿಷವನ್ನು ಗಂಡನು ಅಪಾಯವಿಲ್ಲದೆ ತರುವಂತೆ ಮಾಡುವಳು. ಇನ್ನೊಂದು ಅಮೂಲ್ಯವಾದ ಹರಳನ್ನು ಮಂತ್ರಿಸಿಕೊಟ್ಟು ಅದರ ಮೂಲಕ ರಾಕ್ಷಸಿಯನ್ನು ಕೊಲ್ಲಲು ಉಪಾಯ ಹೇಳಿಕೊಡುವಳು. ಮೂರನೆಯ ಸಲ ಸ್ವರ್ಗದಲ್ಲಿರುವ ತಮ್ಮ ಬಂಧುಗಳನ್ನು ನೋಡಿಕೊಂಡು ಬರಲು ರಾಜಕುಮಾರನಿಗೆ ಅಗ್ನಿಕುಂಡದಲ್ಲಿ ಹಾಕಲು ಯತ್ನಿಸಿದಾಗ, ಏಕತಾರಿ ಕಾಯಿಯನ್ನು ಬೆಂಕಿಗೆ ಹಾಕಿ ಹೊಗೆ ಎಬ್ಬಿಸಿ ಮನೆಗೆ ಓಡಿಬರಲು ಸೂಚಿಸಿ ಪಾರುಮಾಡುತ್ತಾಳೆ. ಸೀತಾದೇವಿಯು ಗಂಡನನ್ನು ಕೊಲ್ಲಬಯಸಿದ

ರಾಜ ಪ್ರಧಾನಿಯರ ಹಂಚಿಕೆಗಳನ್ನು ಹೀಗೆ ತನ್ನ ಪ್ರತಿ ಉಪಾಯದಿಂದ ಸೋಲಿಸುತ್ತ ಹೋಗುವಳು. ಅವಳ ಈ ಪ್ರಯತ್ನಗಳು ಯಮನಿಗೆ ಬೇಸ್ತುಬೀಳುವಂತಹ ಉಪಾಯದ ವರಗಳನ್ನು ಕೇಳಿ ಪಡೆದುಕೊಂಡು ತನ್ನ ಗಂಡನನ್ನು ಉಳಿಸಿಕೊಂಡು ಬರುವ ಸತಿಸಾವಿತ್ರಿಯ ಪುರಾಣದ ಕಥೆಯನ್ನು ನೆನಪಿಸುತ್ತವೆ.

ಮುಂದೆ ರಾಜಕುಮಾರನು ಉಪಾಯದಿಂದ ತನ್ನನ್ನು ಕೊಲ್ಲಲು ಯತ್ನಿಸಿದ ಪ್ರಧಾನಿ ಮತ್ತು ರಾಜನನ್ನು ಕೊಂದು ತಾನೇ ರಾಜನಾಗುತ್ತಾನೆ. ತನ್ನನ್ನು ಚಂಡಾಲರಿಂದ ಕಡಿಯಲು ಅಪ್ಪಣೆ ಮಾಡಿದ್ದ ತಪ್ಪಿಗಾಗಿ ಬರಬಾದಾಗಿ ಕಟ್ಟಿಗೆ ಹೊತ್ತು ಜೀವನ ಮಾಡುವ ದುಃಸ್ಥಿತಿಗೆ ಹೋಗಿದ್ದ ತನ್ನ ತಂದೆಯನ್ನು ಇಲ್ಲಿಗೆ ಕರೆಯಿಸಿಕೊಳ್ಳುತ್ತಾನೆ. ಮಗನ ಪ್ರಾಣವನ್ನು ಉಳಿಸಿದ ತಾಯಿಯು ಈಗ ತನ್ನ ಮಗನನ್ನು ಕಂಡು ಸಂತಸ ಪಡುವಳು.

ಈ ಜನಪದ ಕಥೆಯಲ್ಲಿ ಮುಖ್ಯವಾದ ಸಂಗತಿಗಳು ಎಂದರೆ ಮೂರು ಮಹಿಳೆಯರು ಒಬ್ಬ ಪುರುಷನಿಗೆ ಸಹಾಯ ಮಾಡುವುದು. ೧. ಸ್ವಂತತಾಯಿ ಮಗನ ಪ್ರಾಣವನ್ನು ವಜ್ರ ಹರಳುಗಳ ಬುತ್ತಿಕಟ್ಟಿಕೊಟ್ಟು ಚಂಡಾಲರಿಂದ ರಕ್ಷಿಸುವುದು. ೨. ದೇವಲೋಕದ ಕನ್ಯೆಯ ಸೀರೆಯನ್ನು ಕದ್ದ ತನ್ನ ಭಕ್ತನನ್ನು ಅಟ್ಟಿಸಿಕೊಂಡು ಬರುವ ಸೀತಾದೇವಿಯಿಂದ ಹಲ್ಲಿಯನ್ನಾಗಿ ಮಾಡಿ ಅಡಗಿಸಿ ಅವನ ಪ್ರಾಣವನ್ನು ಉಳಿಸುವುದು ಹಾಗೂ ಉಪಾಯದಿಂದ ದೇವಕನ್ಯೆಯು ತನ್ನ ಭಕ್ತನನ್ನು ಮದುವೆಯಾಗುವಂತೆ ಮಾಡುವುದು. ೩. ತನ್ನ ಗಂಡನನ್ನು ಕೊಲ್ಲುವುದಕ್ಕೆ ಪರದೇಶದ ರಾಜ ಮತ್ತು ಪ್ರಧಾನಿ ಮಾಡುವ ಮಸಲತ್ತುಗಳನ್ನು ಸೀತಾದೇವಿಯು ಸೋಲಿಸಿ, ಅವನನ್ನು ಉಳಿಸಿಕೊಳ್ಳುವುದು. ಪುರುಷ ಪ್ರಧಾನ ಸಮಾಜದಲ್ಲಿ ಮಹಿಳೆಯರನ್ನು ರಕ್ಷಿಸುವ ಪೋಷಿಸುವ ಹಾಗೂ ಕೊಲ್ಲುವ ದಮನಿಸುವ ಕೆಲಸಗಳು ಪುರುಷರೇ ಮಾಡುವುದು ಒಂದು ವೈರುಧ್ಯವಾಗಿದೆ. ಆದರೆ ಈ ಜನಪದ ಕಥೆಯಲ್ಲಿ ಅಸಹಾಯಕರಾದ ಪುರುಷರನ್ನು ತಮ್ಮ ಉಪಾಯಗಾರಿಕೆ, ತಾಯ್ತನ, ಗಂಡನ ಮೇಲಿನ ಪ್ರೇಮಗಳಿಂದ ಮಹಿಳೆಯರು ರಕ್ಷಿಸುವುದನ್ನು ಕಾಣಬಹುದು. ಈ ಕಥೆಯ ಹಿಂದೆ ಮಹಿಳೆಯರು ಕುಟುಂಬ ರಕ್ಷಣೆಗೆ ಮಾಡುವ ಪ್ರತಿಭೆ ಜಾಣತನಗಳು ಮಾತ್ರ ಕೆಲಸ ಮಾಡುವುದಿಲ್ಲ. ದೈವಿಕ ಶಕ್ತಿಯೂ ಕೆಲಸ ಮಾಡುತ್ತದೆ.

ಜನಪದ ಕಥೆಗಳಲ್ಲಿ ನಾಯಕರು ಹಲವಾರು ಅಡಚಣೆಗಳಿಗೆ ಈಡಾಗುತ್ತಾರೆ. ಅವುಗಳನ್ನು ನಿವಾರಿಸಿ ಜಯಶಾಲಿಯಾಗುತ್ತಾರೆ. ಆಗ ಅವರಿಗೆ ಅತಿಮಾನುಷ ರೂಪದಲ್ಲಿರುವ ಶಕ್ತಿಗಳು ನೆರವಾಗುತ್ತವೆ. ಈ ಶಕ್ತಿಗಳು ಸಾಮಾನ್ಯವಾಗಿ ಸ್ತ್ರೀಶಕ್ತಿಯ ರೂಪದಲ್ಲಿರುತ್ತವೆ ಎನ್ನುವುದು ಮುಖ್ಯವಾದುದು.

ಆದರೆ ಮಹಿಳೆಯ ಈ ಬಗೆಯ ಚಿತ್ರಣವನ್ನು ಆಧುನಿಕ ಕಥೆ ಕಾದಂಬರಿಗಳು ಬೇರೆ ರೂಪದಲ್ಲಿ ಕಾಣಿಸುತ್ತವೆ. ಶಂಕರ ಮೊಕಾಶಿ ಪುಣೇಕರ ಅವರ 'ಗಂಗವ್ವ ಗಂಗಾಮಾಯಿ' ಇದಕ್ಕೆ ಒಳ್ಳೆಯ ಉದಾಹರಣೆಯಾಗಿದೆ. ಅಲ್ಲಿ ತನ್ನ ಏಕೈಕ ಮಗನನ್ನು ದುಷ್ಟನಾದ ತಮ್ಮ

ರಾಘವಪ್ಪನಿಂದ ರಕ್ಷಿಸಲು ಮತ್ತು ಮಗನನ್ನು ಒಬ್ಬ ಒಳ್ಳೆಯ ಪ್ರಜೆಯನ್ನಾಗಿ ಮಾಡಲು, ವಿಧವೆಯಾದ ಗಂಗವ್ವ ಎಂಬ ಮಹಿಳೆ ಮಾಡುವ ಹೋರಾಟಗಳ ಚಿತ್ರಣವಿದೆ. ಈ ಹೋರಾಟಗಳು ಈ ಹಿಂದೆ ವಿಶ್ಲೇಷಣೆ ಮಾಡಿದ ಜನಪದ ಕಥೆಯಲ್ಲಿ ತನ್ನ ಮಗನನ್ನು ಗಂಡನಿಂದ ಉಳಿಸಿಕೊಳ್ಳುವ ತಾಯಿಯ ಪಾತ್ರವನ್ನೇ ಹೋಲುತ್ತದೆ. ಈ ಆಶಯವನ್ನುಳ್ಳ ಅನೇಕ ಸಣ್ಣಕಥೆಗಳು ಹಾಗೂ ಕಾದಂಬರಿಗಳು ಕನ್ನಡದಲ್ಲಿವೆ. ಕುವೆಂಪು ಅವರ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಸೇಸಿ ಎಂಬ ತಾಯಿಯೂ ಹೀಗೆ ಉಪಾಯ ಮಾಡುವಳು. ಅವಳು ತನ್ನ ಮಗಳನ್ನು ಅವಳು ಪ್ರೀತಿಸಿರುವ ನಾಯಿಗುತ್ತಿಗೆ ಕೊಡಿಸಬೇಕೆಂದು ಯತ್ನಿಸುತ್ತಾಳೆ. ಆದರೆ ಅವಳ ಗಂಡ ಹಾಗೂ ಅವಳ ಒಡೆಯರು ಇದಕ್ಕೆ ವಿರುದ್ಧವಾಗಿರುತ್ತಾರೆ. ಆಗ ಸೇಸಿಯು ಮಗಳು ಆಭರಣವನ್ನು ಕದ್ದುಕೊಂಡು ಮನೆಬಿಟ್ಟು ಓಡಿಹೋದಳು ಎಂದು ಪುಕಾರು ಹಬ್ಬಿಸಿ, ಅವಳನ್ನು ಗುತ್ತಿಯ ಜತೆ ಕಳಿಸಿಕೊಡುತ್ತಾಳೆ. ಸಮಾಜದಲ್ಲಿ ಮಹಿಳೆಯರು ಪುರುಷಪ್ರಧಾನ ಸಮಾಜದಲ್ಲಿ ಜಮೀನುದಾರಿ ಪದ್ಧತಿಯ ಗೌಡಿಕೆ ಇರುವ ಕಡೆ ತಮ್ಮ ಆಸೆ ಈಡೇರಿಸಿಕೊಳ್ಳಲು ಈ ಬಗೆಯ ಉಪಾಯಗಳನ್ನು ಮಾಡುವುದು ಸಾಮಾನ್ಯವಾಗಿದೆ. ಇಂತಹ ಉಪಾಯಗಾರ ಮಹಿಳೆಯರು ಕುಂವೀ ಅವರ ಕಥೆಗಳಲ್ಲಿಯೂ ಬರುತ್ತಾರೆ.

ಅತ್ತೆ ಸೊಸೆಯಂದಿರ ಕಾದಾಟವು ಜನಪದ ಕಥೆಗಳ ಮುಖ್ಯ ಆಶಯಗಳಲ್ಲಿ ಒಂದಾಗಿದೆ. ಸಾಮಾನ್ಯವಾಗಿ ಭಾರತೀಯ ಕುಟುಂಬಗಳಲ್ಲಿ ಮಹಿಳೆಯರಲ್ಲಿ ಪರಸ್ಪರ ಪೈಪೋಟಿ, ನಾಹೆಚ್ಚು ಎನ್ನುವ ಹಟಮಾರಿತನ ಇರುತ್ತದೆ. ಅತ್ತೆಯು ತನ್ನ ಸೊಸೆಯರನ್ನು ಕಾಲುಕಸಕ್ಕಿಂತ ಕಡೆಯಾಗಿ ಕಾಣುವ ಪ್ರಸಂಗವುಳ್ಳ ಕಥೆಗಳು ವಿಶೇಷವಾಗಿ ಹೆಚ್ಚಾಗಿವೆ. ಅದರಲ್ಲೂ ಬಡಕುಟುಂಬದಿಂದ ಸಿರಿವಂತರ ಮನೆಗೆ ಬರುವ ಸೊಸೆಯಂದಿರಿಗೆ ಈ ಬಗೆಯ ಕಾಟ ವಿಶೇಷವಾಗಿರುತ್ತದೆ. ವಿಪರ್ಯಾಸವೆಂದರೆ ಕೆಲವು ಅತ್ತೆಯಂದಿರು ತಾವು ಹೆಣ್ಣು ಅನ್ನುವುದನ್ನು ಮರೆತು ಯಜಮಾನಿಕೆಯನ್ನು ನಡೆಸುವುದು. ತವರು ಮನೆಯನ್ನು ಬಿಟ್ಟು ತನ್ನವರೆಲ್ಲರನ್ನು ತೊರೆದು ಬಂದ ಸೊಸೆಯಂದಿರನ್ನು, ಅತ್ತೆಯೇ ತಾಯಿಸಮಾನವೆಂದು ಹಗಲಿರುಳು ಕತ್ತೆಯಂತೆ ದುಡಿದರೂ ಅಪವಾದಗಳನ್ನು ಹೊರೆಸಿ ಕಾಟಕೊಡುವುದು. ಅತ್ತೆಯು ಸೊಸೆಯಂದಿರಿಗೆ ವರದಕ್ಷಿಣೆ ಹಣ ತರುವಂತೆ ಕಾಡಿಸುವುದು, ಅದನ್ನು ತಂದರೆ ಪ್ರೀತಿಯಿಂದ ನೋಡಿಕೊಳ್ಳುವುದು, ಇಲ್ಲವಾದಲ್ಲಿ ಅವರನ್ನು ಕೊಲ್ಲುವುದು ಈಗಲೂ ನಡೆಯುತ್ತಿದೆ. ಇಂತಹ ದುರ್ಘಟನೆಗಳನ್ನು ನಾವು ಇಂದು ಪತ್ರಿಕೆ ಮಾಧ್ಯಮಗಳಲ್ಲಿ ಗಮನಿಸುತ್ತಿದ್ದೇವೆ. ಅತ್ತೆ ಮತ್ತು ನಾದಿನಿಯರು ಕೂಡ ಮಹಿಳೆಯರೇ. ಆದರೆ ಬೇರೆ ಮನೆಯಿಂದ ಬಂದು ಗಂಡನ ಮನೆಯಲ್ಲಿದ್ದ ಇವರನ್ನು ಕೆಲವು ಸೊಸೆಯಂದಿರನ್ನು ಕೀಳಾಗಿ ಕಾಣುವ ಪ್ರಸಂಗಗಳೂ ಇವೆ. ಆಗಲೆ ಸೊಸೆಯಂದಿರ ಅಥವಾ ನಾದಿನಿಯರ ಉಪಾಯಗಾರಿಕೆಯ ಪ್ರತಿಭೆಯು ಬಿಚ್ಚಿಕೊಳ್ಳುವುದು. ಈ ಜಾಣಸೊಸೆಯರ ಕಥೆಗಳ ಹಿನ್ನೆಲೆಯಲ್ಲಿ ಗ್ರಾಮೀಣ ರೈತಾಪಿ ಕುಟುಂಬಗಳ ಹಿನ್ನೆಲೆಯಿರುವುದು ಗಮನಾರ್ಹ.

ಇಲ್ಲಿ ಚರ್ಚೆಗೆ ಎತ್ತಿಕೊಂಡಿರುವ ಜನಪದ ಕಥೆಯಲ್ಲಿ ಒಂದು ಕುಟುಂಬದಲ್ಲಿ ಮೂರು ಜನ ಗಂಡು ಮಕ್ಕಳಿದ್ದು ತಂದೆತಾಯಿಗಳು ಅವರಿಗೆ ತಕ್ಕನಾದ ಕನ್ಯೆಯರನ್ನು ನೋಡಿ ಮದುವೆ ಮಾಡಿಕೊಂಡು ಬರುವರು. ಈ ಸೊಸೆಯಂದಿರು ಅತ್ತೆ ಹೇಳುವ ಎಲ್ಲಾ ಕೆಲಸಗಳನ್ನು ಚಾಚು ತಪ್ಪದೇ ನಿಷ್ಠೆಯಿಂದ ಮಾಡುತ್ತಿರುತ್ತಾರೆ. ಸ್ವಲ್ಪ ದಿನಗಳು ಕಳೆದ ನಂತರ ಮಾವ ತೀರಿಕೊಳ್ಳುವನು. ಬಳಿಕ ಅತ್ತೆಯು ಸೊಸೆಯಂದಿರನ್ನು ಗೋಳಾಡಿಸುವುದಕ್ಕೆ ಶುರು ಮಾಡುತ್ತಾಳೆ. ಅತ್ತೆ ಏನಾದರೂ ತಪ್ಪು ಕಂಡುಹಿಡಿದು ನೆಪವೊಡ್ಡಿ ಅವರನ್ನು ವ್ಯಂಗ್ಯವಾಗಿ ಟೀಕಿಸುತ್ತಿರುತ್ತಾಳೆ. ಅವರಿಗೆ ಸರಿಯಾಗಿ ಉಣ್ಣುವುದಕ್ಕೆ ಕೊಡುವುದಿಲ್ಲ. ಒಂದು ದಿವಸ ಉಪವಾಸ ಇದ್ದರೇನು ಸಾಯಂಗಿಲ್ಲ ಅಂತ ಹೇಳಿ ಜಿಪುಣತನ ಮಾಡುತ್ತಿರುತ್ತಾಳೆ. ಹೀಗಾಗಿ ಮೂರು ಸೊಸೆಯಂದಿರು ಅತ್ತೆಗೆ ಬುದ್ದಿ ಕಲಿಸಬೇಕೆಂದು ಉಪಾಯವನ್ನು ಮಾಡುವರು.

ಅತ್ತೆಯಾದವಳಿಗೆ ಆಸ್ತಿಯ ಮೇಲೆ ಹೆಚ್ಚು ಆಸೆ. ಹೀಗಾಗಿ ಅವಳು ಸೊಸೆಯರನ್ನು ಮನೆತನದ ಕೆಲಸಕ್ಕೆ ಹಚ್ಚಿ ಜಮೀನಿಗೆ ದುಡಿಯುವುದಕ್ಕೆ ಹೋಗುತ್ತಿರುತ್ತಾಳೆ. ಸೊಸೆಯಂದಿರು ಅತ್ತೆ ಇಲ್ಲದ ಸಮಯವನ್ನು ನೋಡಿ ಕರಗಡುಬು ಮಾಡಿ ಉಣ್ಣುವುದಕ್ಕೆ ಎಲ್ಲಾ ವ್ಯವಸ್ಥೆಯನ್ನು ಮಾಡಿಕೊಳ್ಳುವರು. ಒಬ್ಬಳು ಗೋಧಿಯನ್ನು ಹಸನ ಮಾಡಿ ಬೀಸಿದರೆ, ಮತ್ತೊಬ್ಬಳು ಬೆಲ್ಲ, ಇನ್ನೊಬ್ಬಳು ಎಣ್ಣೆ ತರುವಳು. ಮೂರು ಮಂದಿ ಸೇರಿ ಕರಿಗಡಬು ತಯಾರಿಸುವರು. ತಮ್ಮ ತಮ್ಮ ಗಂಡಂದಿರು ಬಂದಾಗ ಅವರಿಗೆ ತಂಗಳ ರೊಟ್ಟಿ ಪುಂಡಿಪಲ್ಲೆ, ನುಚ್ಚುಹುಳಿ, ಮಜ್ಜಿಗೆ, ಊಟಕ್ಕೆ ಬಡಿಸುವರು. ಇನ್ನೇನು ಕರಿಗಡಬು ಉಣ್ಣುಬೇಕೆನ್ನುವಷ್ಟರಲ್ಲಿ ಅತ್ತೆ ಜಮೀನಿಂದ ಬಂದುಬಿಡುತ್ತಾಳೆ. ಕರಿಗಡುಬು ಹಾಗೂ ತುಪ್ಪ ಹಾಕಿದ ತಟ್ಟೆಗಳನ್ನು ಅವರು ಅವಸರದಲ್ಲಿ ದನ ಕಟ್ಟುವ ಜಾಗದಾಗ ಇಟ್ಟುಬಿಡುವರು. ಅತ್ತೆಗೆ ಕರಿಗಡುಬು ಕರಿದ ಎಣ್ಣೆಯ ವಾಸನೆ ಬರಬಾರದೆಂದು ದೇವರ ಮುಂದೆ ಇಟ್ಟಿದ್ದ ಆರತಿಯನ್ನು ಅರ್ಧಕ್ಕೆ ಆರಿಸಿ ಅದನ್ನು ಒಲೆಯಲ್ಲಿ ತಂದು ಹಾಕುವರು ಇದರಿಂದ ಮನೆಯೆಲ್ಲಾ ಕಮರುವಾಸನೆ ಬರಲಾರಂಭಿಸುತ್ತದೆ. ಅತ್ತೆಯು ವಾಸನೆಯ ಕಾರಣ ಕೇಳಿದಾಗ, ತಪ್ಪಿಸಿಕೊಳ್ಳುವುದಕ್ಕಾಗಿ ಹಣತೆಯೊಳಗೆ ಎಣ್ಣೆಜಿಗಿ ಬಹಳ ಕುಂತಿತ್ತು. ಅದನ್ನು ಬೆಂಕಿ ಹಾಕಿ ಸ್ವಚ್ಛಮಾಡಬೇಕಂತ ಒಲೆಯಲ್ಲಿ ಹಾಕಿದ್ದೇವೆ ಎಂದು ಸುಳ್ಳು ಹೇಳುವರು.

ರಾತ್ರಿ ಉಣ್ಣು ಹೊತ್ತಿಗೆ ಮುದುಕಿ ಅತ್ತೆಯ ಊಟ ಮಾಡಿಸುವರು. ತಾವು ಕರಿಗಡಬು ತಿನ್ನುವುದಕ್ಕಾಗಿ ಉಪವಾಸ ಇರುವುದಾಗಿ ಸುಳ್ಳು ಹೇಳುವರು. ಅತ್ತೆಯು ತನ್ನ ಸೊಸೆಯಂದಿರಿಗೆ ದೇವರ ಮ್ಯಾಲೆ ಭಕ್ತಿ ಜಾಸ್ತಿ ಇದೆಯೆಂದು ಭಾವಿಸಿ ಮಲಗುವಳು. ಸೊಸೆಯಂದಿರು ನಡುರಾತ್ರಿಯಲ್ಲಿ ಒಬ್ಬರಿಗೊಬ್ಬರು ಸನ್ನೆ ಮಾಡಿಕೊಂಡು ಅಡುಗೆ ಮನೆಸೇರಿ ಕರಿಗಡುಬು ತಿನ್ನಲು ಉಪಾಯ ಮಾಡುವರು.

ಒಬ್ಬಳು ತುಸು ಜಾಣಳಾದ ಕಿರಿಸೊಸೆ ನಡುರಾತ್ರಿಯಲ್ಲಿ ಹೋಗಿ ಕರಿಗಡುಬಿನ ಪಾತ್ರೆಯನ್ನು ತೆಗೆದುಕೊಂಡು ಬರುವಾಗ ಮನೆಯ ನಡುಮಧ್ಯದಲ್ಲಿ ಕಟ್ಟಿದ್ದ ಕೋಣಕ್ಕೆ ಢಿಕ್ಕಿಹೊಡೆದು ಕೈಯಲ್ಲಿರುವ ಪಾತ್ರೆ ತಟ್ಟೆಗಳು ಕೆಳಕ್ಕೆ ಬೀಳುತ್ತವೆ. ಪಾತ್ರೆಬಿದ್ದ ಶಬ್ದಕ್ಕೆ ಅತ್ತೆಯು ಎಚ್ಚರವಾಗಿ ಯಾರು ಎಂದು ಕೇಳಿದಾಗ, ನಡುವಿನ ಸೊಸೆಯು ತಪ್ಪಿಸಿಕೊಳ್ಳುವುದಕ್ಕಾಗಿ ಉಪಾಯದಿಂದ ತನ್ನ ತಲೆಯ ಕೂದಲನ್ನು ವಿಕಾರವಾಗಿ ಮಾಡಿಕೊಂಡು ಕೋಣನ ಮೇಲೆ ಕುಳಿತುಕೊಳ್ಳುವಳು. 'ನಾನು ನಿಮ್ಮ ಊರಿನ ದೇವತೆ. ನೀನು ನಿನ್ನ ಸೊಸೆಯಂದಿರಿಗೆ ಬಹಳ ಕಿರುಕುಳ ನೀಡುತ್ತಿದ್ದಿಯಾ. ನೀನು ಗಂಡು ಮಕ್ಕಳಿಗೆ ಸರಿಯಾಗಿ ಊಟಹಾಕುವುದಿಲ್ಲವೆಂದು ಅವರು ಬಂದು ನನ್ನ ಮೊರೆಹೊಕ್ಕಿದ್ದಾರೆ. ಅದಕ್ಕೆ ಇವತ್ತು ನಿನ್ನ ನುಂಗಲು ಬಂದಿರುವೆ ಎಂದು ಹೇಳುವಳು. ಕೋಣದ ಮೇಲೆ ಕುಳಿತ ಸೊಸೆಯ ರೌದ್ರಾವತಾರವನ್ನು ಅತ್ತೆ ನೋಡುವಳು. ಅವಳ ಕೈಯಲ್ಲಿರುವ ಕಂಚಿನ ತಟ್ಟೆ, ಹಣೆಯ ಮೇಲಿನ ಮಿರಿಮಿರಿ ಮಿಂಚುವ ಕುಂಕುಮ, ಕೈಬಳೆಯ ಝಣಝಣ ನಾದ ಅವಳಿಗೆ ನಿಜಕ್ಕೂ ಅವತಾರವೆತ್ತಿದ ದ್ಯಾಮವ್ವ ಎಂಬ ವಿಭ್ರಮೆ ಉಂಟುಮಾಡುತ್ತದೆ. ಸೊಸೆಯ ಭಾರಕ್ಕೆ ಕೋಣವು ಅರಚುತ್ತಿರುತ್ತದೆ. ಆಗ ಅತ್ತೆಯು ಧೈರ್ಯ ಮಾಡಿಕೊಂಡು 'ಏನು ಮಾಡಬೇಕು ತಾಯಿ? ನಿನ್ನ ಬೇಡಿಕೆ ಏನು?' ಎಂದು ಕೇಳುವಳು. ಆಗ ಸೊಸೆಯು ಮೂರು ವರ್ಷಕ್ಕೊಮ್ಮೆ ನನ್ನ ಜಾತ್ರೆಗೆ ಕೋಣವನ್ನು ಬಲಿಕೊಡಬೇಕು. ಮುತ್ತೈದೆತನ ಮಾಡಬೇಕು ಎನ್ನುವಳು. ಅತ್ತೆ ಅವೆಲ್ಲವುದಕ್ಕೂ ಸಮ್ಮತಿಸುವಳು. ಸೊಸೆಯು ತನಗೆ ಇಚ್ಛೆ ಇರುವ ಎಲ್ಲಾ ಶರತ್ತುಗಳನ್ನು ಉಪಾಯದ ಮೂಲಕ ಹೇಳುವಳು. ಸೊಸೆಯಂದಿರ ಮೇಲೆ ಏನಾದರೂ ಕಿರುಕುಳ ಕೊಟ್ಟರೆ ನಿನ್ನನ್ನು ಸಾಯುಸುತ್ತೇನೆ ಎಂದು ಕೋಣನ ಬೆನ್ನಿಂದ ಇಳಿದು ಅಡಗಿಕೊಳ್ಳುವಳು. ಕಡೆಗೆ ತಾವು ಮಾಡಿಟ್ಟ ಕರಿಗಡುಬುಗಳನ್ನು ತುಪ್ಪ ಹಾಕಿಕೊಂಡು ಮೂವರೂ ಸೊಸೆಯಂದಿರು ಕೂಡಿಕೊಂಡು ಸಂತೋಷದಿಂದ ಉಣ್ಣುವರು. ಅತ್ತೆಯು ಬೆಳಿಗ್ಗೆ ಎದ್ದಮೇಲೆ ರಾತ್ರಿ ತಾನು ಕಂಡ ಘಟನೆಯನ್ನು ಸೊಸೆಯಂದಿರಿಗೆ ಹೇಳುವಳು. ಅಂದಿನಿಂದ ಅವಳು ಸೊಸೆಯಂದಿರ ಮೇಲೆ ತನ್ನ ಕಾಟ ನಿಲ್ಲಿಸುವಳು. ಇಡೀ ಕುಟುಂಬವು ಸುಖವಾಗಿರುವುದು.

ಅತ್ತೆ ಸೊಸೆಯಂದಿರು ತನ್ನ ಕೈವಶವಾಗಿಯೇ ಇರಬೇಕೆಂಬ ದೂರಾಲೋಚನೆಯಿಂದ ಮೆರೆಯುವ ಅತ್ತೆಗೆ ತಮ್ಮ ಚತುರ ಶಕ್ತಿಯಿಂದ ಸೊಸೆಯಂದಿರು ಉಪಾಯ ಮಾಡಿ ಅತ್ತೆಗೆ ಬುದ್ಧಿ ಕಲಿಸುವರು. 'ಅತ್ತೆಗೆ ಒಂದು ಕಾಲ, ಸೊಸೆಗೆ ಒಂದು ಕಾಲ' ಎನ್ನುವ ಗಾದೆಯಂತೆ ಸೊಸೆಯಂದಿರು ಬುದ್ಧಿವಂತಿಕೆ ತೋರುವರು. ಸೊಸೆಯಂದಿರ ಈ ಉಪಾಯಗಾರಿಕೆಯು ಈ ಕಥೆಯಲ್ಲಿ ತುಂಬಾ ಸ್ವಾರಸ್ಯಕರವಾಗಿ ಮೂಡಿಬಂದಿದೆ. ಈ ಕಥೆಯ ವಿಶಿಷ್ಟತೆಯೆಂದರೆ, ಉಪಾಯ ಹೂಡುವ ಸೊಸೆಯಂದಿರು ವಯಸ್ಸಿನಲ್ಲಿ ಚಿಕ್ಕವರಾಗಿರುವುದು. ಅವರು ಮಾಡುವ ಉಪಾಯಗಾರಿಕೆಯಲ್ಲಿ ಸುಳ್ಳಿನ ಅಂಶವಿದ್ದರೂ, ಒಟ್ಟಾರೆ ಪರಿಣಾಮವು ಕುಟುಂಬದ ಸಾಮರಸ್ಯ ಹಾಳುಮಾಡುವ ವ್ಯಕ್ತಿಯನ್ನು ದೇವರ ಹೆಸರಲ್ಲಿ ಬೆದರಿಸಿ ಸರಿಯಾದ ದಾರಿಗೆ ತರುವುದು.

ಇಲ್ಲಿ ಸೊಸೆಯಂದಿರ ಅಸಹಾಯಕತೆಯ ಅಂಶವೇ ಉಪಾಯಗಾರಿಕೆಗೆ ಕಾರಣವಾಗಿರುವುದು ಗಮನಾರ್ಹ. ಅವರಲ್ಲಿರುವ ಒಗ್ಗಟ್ಟುಕೂಡ ಇದಕ್ಕೆ ಪೂರಕವಾಗಿದೆ. ದ್ಯಾಮವ್ವನ ಅವತಾರ ಎತ್ತುವ ಸೊಸೆಯು ವಯಸ್ಸಿನಲ್ಲಿ ಕಿರಿಯವಳು ಎಂಬುದು ಇನ್ನೊಂದು ಮುಖ್ಯವಾದ ಅಂಶವಾಗಿದೆ. ಜನಪದ ಕಥೆಗಳಲ್ಲಿ ಸಾಮಾನ್ಯವಾಗಿ ದೊಡ್ಡಮಗ ಹಿರಿಯ ಸೊಸೆ ಮಂದಬುದ್ಧಿಯವರಾಗಿ, ಕಿರಿಯ ಮಗ, ಕಿರಿಯ ಮಗಳು, ಕಿರಿಯ ಸೊಸೆ ಜಾಣರಾಗಿದ್ದಾರೆ. ವಯಸ್ಸಿನಲ್ಲಿ ಚಿಕ್ಕವರಾಗಿವುದಕ್ಕೂ ಅವರಲ್ಲಿ ಹೆಚ್ಚು ಉಪಾಯಗಳು ಹೊಳೆಯುವುದಕ್ಕೂ ಜನಪದ ಕಥೆಗಳಲ್ಲಿ ಇರುವ ಈ ಸಂಬಂಧವು ಕುತೂಹಲಕರವಾಗಿದೆ. (ಕಿರಿಯರ ಉಪಾಯಗಾರಿಕೆ ಕುರಿತ ಚರ್ಚೆಯಿರುವ ಅಧ್ಯಾಯದಲ್ಲಿ ಈ ಅಂಶವು ಮತ್ತಷ್ಟು ವಿಸ್ತಾರವಾಗಿ ಚರ್ಚೆಗೆ ಒಳಗಾಗುವುದು.) ಈ ಕಥೆಯಲ್ಲಿ ಉಪಾಯಗಾರಿಕೆ ಮಾಡುವವರು ಶೋಷಣೆಗೆ ಒಳಗಾದ ಮಹಿಳೆಯರು. ಅವರನ್ನು ಶೋಷಣೆಗೆ ಒಳಗು ಮಾಡಿದವಳೂ ಒಬ್ಬ ಮಹಿಳೆಯೇ. ಈ ಶೋಷಕ ಮಹಿಳೆಯನ್ನು ಹೆದರಿಸಲು ಸೊಸೆಯಂದಿರುವ ಬಳಸುವುದು ದ್ಯಾಮವ್ವ ಎಂಬ ಮತ್ತೊಬ್ಬ ಸ್ತ್ರೀದೇವತೆಯ ರೂಪವನ್ನು. ಹೀಗಾಗಿ ಇಡೀ ಕಥೆಯಲ್ಲಿ ಸ್ತ್ರೀಯರ ಜಗತ್ತಿನೊಳಗೆ ಹುಟ್ಟುವ ಕೌಟುಂಬಿಕ ಬಿಕ್ಕಟ್ಟು ಅವರ ಮೂಲಕವೇ ಬಗೆಹರಿಯುವುದು. ಇದರಲ್ಲಿ ಗಂಡಸರ ಪಾತ್ರವು ಇಲ್ಲವೇ ಇಲ್ಲವೆನ್ನುವಷ್ಟು ಕಡಿಮೆಯಿದೆ. ಬಹುಶಃ ಈ ಕಥೆಯನ್ನು ಯಾರೊ ಮಹಿಳೆಯರೆ ಕಟ್ಟಿರಬಹುದು ಎಂದು ಅನಿಸುತ್ತದೆ.

ಜನಪದ ಕಥೆಗಳಲ್ಲಿ ಮಹಿಳೆಯರು ತೋರುವ ಉಪಾಯಗಾರಿಕೆಗಳು ಎರಡು ವಿಭಿನ್ನ ಜಗತ್ತುಗಳಲ್ಲಿ ಸಂಭವಿಸುತ್ತವೆ. ಮೊದಲನೆಯದಾಗಿ ಗ್ರಾಮೀಣ ರೈತಾಪಿ ಕುಟುಂಬಗಳಲ್ಲಿ. ಎರಡನೆಯದಾಗಿ ಅರಮನೆಗಳಲ್ಲಿ.

ರೈತಾಪಿ ಕುಟುಂಬಗಳಲ್ಲಿ ಸೊಸೆಯಂದಿರಿಂದ ಬಿಕ್ಕಟ್ಟನ್ನು ಎದುರಿಸುವ ಅತ್ತೆಯಂದಿರು ಉಪಾಯಗಳನ್ನು ಮಾಡುವರು. ಇಲ್ಲವೇ ಅತ್ತೆಯರಿಂದ ಬಿಕ್ಕಟ್ಟನ್ನು ಎದುರಿಸುವ ಸೊಸೆಯಂದಿರು ಉಪಾಯವನ್ನು ಹೂಡುವರು. ತನ್ನ ಸೊಸೆಯಂದಿರ ನಿರ್ಲಕ್ಷ್ಯಕ್ಕೆ ಗುರಿಯಾಗಿ ನೊಂದುಕೊಳ್ಳುವ ಅತ್ತೆಯೊಬ್ಬಳು ತನ್ನ ಉಪಾಯಗಾರಿಕೆಯಿಂದ ಸುಖವಾಗಿ ಜೀವನ ಕಳೆಯುವ ಆಶಯವುಳ್ಳ ಜನಪದ ಕಥೆಯೊಂದರ ಚರ್ಚೆಯು ಮುದುಕರ ಉಪಾಯಗಾರಿಕೆ ಅಧ್ಯಾಯದಲ್ಲಿ ವಿಸ್ತಾರವಾಗಿ ಬರುವುದು. ಈ ಜನಪದ ಕಥೆಗಳು ಉಪಾಯಗಾರಿಕೆ ಮಾಡುವ ಮಹಿಳೆಯರು ಬಹಳ ದೊಡ್ಡದೊಡ್ಡ ಸಂಪತ್ತನ್ನು ಪಡೆಯಲು ಹೋರಾಡುವುದಿಲ್ಲ. ಮಾನಸಿಕವಾದ ನೆಮ್ಮದಿಗೆ, ಎರಡು ಹೊತ್ತಿನ ಊಟಕ್ಕೆ ಹೋರಾಡುವ ಭಾಗವಾಗಿ ಉಪಾಯಗಾರಿಕೆ ಮಾಡುವವರು. ಈ ಹಿಂದೆ ಚರ್ಚಿಸಿದ ಕಥೆಯಲ್ಲಿ ಸೊಸೆಯಂದಿರ ಬಹಳ ದೊಡ್ಡ ಆಸೆಯೆಂದರೆ ಕರಿಗಡುಬು ಮಾಡಿಕೊಂಡು ತಿನ್ನುವುದು. ಇಂತಹ ಸಣ್ಣದೊಂದು ಬಯಕೆಯನ್ನು ಈಡೇರಿಸಿಕೊಳ್ಳಲು ಕಷ್ಟಸಾಧ್ಯವಾಗಿರುವ ದುಡಿಮೆಯ ಜಗತ್ತಿನಲ್ಲಿ ಅವರು ಬದುಕುತ್ತಿದ್ದಾರೆ. ಇಲ್ಲವೇ ಅತ್ತೆಯ

ಯಜಮಾನಿಕೆ ಇರುವ ಕುಟುಂಬ ವ್ಯವಸ್ಥೆಯಲ್ಲಿ ಅವರು ಬದುಕುತ್ತಿದ್ದಾರೆ. ಮೇಲ್ಕಾಣಿಸಿದ ಕಥೆಯು ಇಂತಹ ಪುಟ್ಟ ಜಗತ್ತಿನಲ್ಲಿ ನಡೆಯುವ ಕಿರುಕುಳ ಹಾಗು ಅದನ್ನು ಮೆಟ್ಟಿನಿಲ್ಲುವ ದಮನಿತರ ಜಾಣ್ಮೆಯನ್ನು ಪ್ರತಿಬಿಂಬಿಸುತ್ತವೆ.

ಇನ್ನು ಅರಮನೆಗಳಲ್ಲಿ ನಡೆಯುವ ದಮನ ಮತ್ತು ಬಿಡುಗಡೆಯ ವಿನ್ಯಾಸಗಳು ಇನ್ನೂ ಗಂಭೀರವಾಗಿರುತ್ತವೆ. ಅಲ್ಲಿ ಮಹಿಳೆಯರು ರಾಜಕೀಯ ಬಿಕ್ಕಟ್ಟುಗಳಲ್ಲಿ ಭಾಗವಹಿಸಿ ಉಪಾಯಗಳನ್ನು ಶೋಧಿಸುವರು. ಮಂತ್ರಿಯ ಮಗನಿಂದ ಮದುವೆಯನ್ನು ತಪ್ಪಿಸುವುದು, ತಂದೆಯನ್ನು ಕೊಲ್ಲಲು ಯತ್ನಿಸುವವರನ್ನು ಮಗಳು ಸೋಲಿಸುವುದು, ರಾಜ್ಯವನ್ನು ಅಪಹರಿಸುವವರಿಂದ ರಕ್ಷಿಸುವುದು, ತನಗೆ ಬೇಕಾದ ರಾಜಕುಮಾರನನ್ನು ಮದುವೆಯಾಗುವುದು, ತನ್ನ ಮಗನಿಗೆ ಪಟ್ಟ ಸಿಕ್ಕುವಂತೆ ತಾಯಂದಿರು ಯತ್ನಿಸುವುದು–ಹೀಗೆ ಉಪಾಯಗಳು ಕೊಂಚ ಭಿನ್ನವಾಗಿರುತ್ತವೆ.

ಇಲ್ಲಿಯೇ ದಮನಿತ ಮಹಿಳೆಯರು ಹೇಗೆ ಕಷ್ಟದಿಂದ ಪಾರಾಗುತ್ತಾರೆ ಎಂಬುದನ್ನು ಕನ್ನಡ ಸಣ್ಣಕಥೆಗಳು ಹೇಗೆ ಚಿತ್ರಿಸುತ್ತವೆ ಎಂಬುದನ್ನು ಗಮನಿಸಬಹುದು. ಇದರಿಂದ ಜನಪದ ಕಥೆಗಳ ಉಪಾಯಗಾರ ಮಹಿಳೆಯರ ವಿಶಿಷ್ಟತೆಗಳು ಸ್ಪಷ್ಟವಾಗುತ್ತವೆ. ಲಂಬಾಣಿ ಸಂಸ್ಕೃತಿಯ ಜೀವನ ವೈವಿಧ್ಯವನ್ನು ಚಿತ್ರಿಸುವ ಬಿ.ಟಿ.ಲಲಿತನಾಯಕ ಅವರ ಸಣ್ಣಕಥೆಗಳಲ್ಲಿ ಹೀಗೆಯೇ ಜೀವನದ ಕಷ್ಟಗಳನ್ನು ಎದುರಿಸುವ ಅನೇಕ ಮಹಿಳಾ ಪಾತ್ರಗಳು ಬರುತ್ತವೆ. ಅವುಗಳಲ್ಲಿ 'ಲೂಟಿ' ಎಂಬ ಕಥೆಯೂ ಒಂದು. ಈ ಕಥೆಯ ನಾಯಕಿ ರಾಮಿ ಒಬ್ಬ ಲಂಬಾಣಿ ಬಡ ಮಹಿಳೆಯಾಗಿರುತ್ತಾಳೆ. ಈಕೆಯ ಗಂಡನು ಗೌಡರ ಹೊಲದಲ್ಲಿ ಜೀತಗಾರನು. ಒಮ್ಮೆ ಈತ ಗೌಡರ ಹೊಲಕ್ಕೆ ಗೊಬ್ಬರದ ಬಂಡಿ ಹೊಡೆಯುವಾಗ ಅಪಘಾತಕ್ಕೆ ಈಡಾಗಿ ಸೊಂಟ ಮುರಿದುಕೊಳ್ಳುವನು. ಗಂಡನ ದುಃಸ್ಥಿತಿ ಕಂಡು ಕಂಗಾಲಾಗುವ ರಾಮಿಯು ಧಣಿಯಲ್ಲಿ ತನ್ನ ಗಂಡನನ್ನು ಆಸ್ಪತ್ರೆಗೆ ಹಾಕಿ ಗುಣಮುಖ ಮಾಡಿಸಲು ವಿನಂತಿಸುವಳು. ಆದರೆ ಗೌಡ ಇದನ್ನು ಒಪ್ಪುವುದಿಲ್ಲ. ಇಡೀ ಕುಟುಂಬ ಕಷ್ಟಕ್ಕೆ ಸಿಲುಕಿಬಿಡುತ್ತದೆ. ಅಂಗವಿಕಲನಾಗಿ ಕೆಲಸ ಮಾಡುವ ಶಕ್ತಿ ಕಳೆದುಕೊಂಡು ಮೂಲೆ ಹಿಡಿಯುವ ಗಂಡನನ್ನೂ ತನ್ನ ನಾಲ್ಕು ಮಕ್ಕಳನ್ನೂ ಸಾಕುವ ಭಾರವನ್ನು ರಾಮಿ ಹೊತ್ತುಕೊಳ್ಳುತ್ತಾಳೆ. ಕಟ್ಟಿಗೆ ಮಾರಿ ಜೀವನ ಮಾಡತೊಡಗುತ್ತಾಳೆ. ಒಮ್ಮೆ ಕಟ್ಟಿಗೆ ತರಲು ಅವಳು ಕಾಡಿಗೆ ಹೋದಾಗ ಇಬ್ಬರು ದಾಂಡಿಗರ ಕೈಗೆ ಸಿಕ್ಕಿಬೀಳುತ್ತಾಳೆ. ಅವರು ಆಕೆಯ ಮೇಲೆ ಅತ್ಯಾಚಾರ ಮಾಡುವರು. ಆದರೆ ಮಾನಭಂಗಕ್ಕೆ ಒಳಗಾದ ರಾಮಿ ತನಗಾದ ಅವಸ್ಥೆಗೆ ಕೇವಲ ಅಳುತ್ತ ಕೂರುವುದಿಲ್ಲ. ಬದಲಿಗೆ ಕಟ್ಟಿಗೆ ಕಡಿಯಲು ತಂದಿದ್ದ ಕೊಡಲಿಯನ್ನು ಎತ್ತಿಕೊಂಡು, ಕಾಳಿಯ ಅವತಾರ ತಾಳಿ, ತನ್ನನ್ನು ಕೆಡಿಸಿದವರನ್ನು ಅಟ್ಟಿಸಿಕೊಂಡು ಹೋಗುತ್ತಾಳೆ. ಇಲ್ಲಿ ಅವಳಲ್ಲಿ ಬಿಕ್ಕಟ್ಟಿನಿಂದ ತಪ್ಪಿಸಿಕೊಳ್ಳುವ ಉಪಾಯಗಾರಿಕೆ ಹುಟ್ಟುವುದಿಲ್ಲ. ಬದಲಿಗೆ ದುರಂತವೇ ಸಂಭವಿಸುತ್ತದೆ. ಆದರೆ ಜನಪದ ಕಥೆಗಳಲ್ಲಿ ಬಿಕ್ಕಟ್ಟುಗಳು ದುರಂತದಲ್ಲಿ ಮುಗಿಯುವುದಿಲ್ಲ. ಅವು ಮಹಿಳೆಯರ ಜಾಣ್ಮೆಯಿಂದ ಪರಿಹಾರಗೊಳ್ಳುತ್ತವೆ.

ಇಂತಹ ಉಪಾಯಗಾರ ನಾಯಕಿಯರನ್ನು ಸೃಷ್ಟಿಸುವ ಮೂಲಕ ಜನಪದವು ವಾಸ್ತವತೆಯಿಂದ ದೂರ ಸರಿದು, ಒಂದು ರಮ್ಯಲೋಕವನ್ನು ಕಟ್ಟಿಕೊಡುತ್ತದೆಯೆ ಎಂಬ ಪ್ರಶ್ನೆಯೂ ಇಲ್ಲಿ ಹುಟ್ಟುತ್ತದೆ. ಬಹುಶಃ ಜನಪದರ ಆಲೋಚನ ಕ್ರಮದಲ್ಲೆ ಬದುಕನ್ನು ದುರಂತದಲ್ಲಿ ಮುಗಿಯುವುದನ್ನು ಕಲ್ಪಿಸಿಕೊಳ್ಳುವಿಕೆಯಿಲ್ಲ. ಅವರು ಬಿಕ್ಕಟ್ಟಿನಲ್ಲಿ ಸಿಲುಕಿದ ಪಾತ್ರಗಳನ್ನು ಅವರೊಳಗೆ ಹೊಳೆಯುವ ಕಿಲಾಡಿತನದಿಂದಲೊ, ಯಾರೊ ಕೊಟ್ಟ ಮಂತ್ರದ ದಂಡದಿಂದಲೊ, ಕಷ್ಟಕ್ಕೆ ಸಿಲುಕಿದವರನ್ನು ರಕ್ಷಿಸಲು ನೆಲಕ್ಕೆ ಬರುವ ದೇವರ ಪ್ರತ್ಯಕ್ಷವಾಗುವಿಕೆಯಿಂದಲೊ ಪ್ರಾಣಿ ಪಕ್ಷಿಗಳ ನೆರವಿನಿಂದಲೊ ಪಾರುಮಾಡುವರು. ಮೇಲ್ಕಾಣಿಸಿದ ಜನಪದ ಕಥೆಯಲ್ಲಿ ಸೊಸೆಯಂದಿರ ಕಷ್ಟಕ್ಕೆ ದೇವರು ಪ್ರತ್ಯಕ್ಷವಾಗುವುದಿಲ್ಲ. ಆದರೆ ದೇವರ ಬಗ್ಗೆ ಅತ್ತೆಗೆ ಇರುವ ಭಕ್ತಿಯನ್ನು ಬಳಸಿಕೊಂಡು ಸೊಸೆ ಎತ್ತುವ ದೇವರ ಅವತಾರವು ನೆರವಾಗುತ್ತದೆ. ಈ ಪ್ರಸಂಗದಲ್ಲಿ ಪ್ರಾಣಿಯಾದ ಕೋಣವು ಆಕೆಯ ಉಪಾಯತನಕ್ಕೆ ಪೂರಕವಾಗಿ ಒದಗುವುದು ಗಮನಾರ್ಹವಾಗಿದೆ.

ಇನ್ನೊಂದು ಜನಪದ ಕಥೆಯಲ್ಲಿ ಛಲಗಾರ್ತಿ ಸೊಸೆಯ ಪ್ರಸಂಗ ಬರುತ್ತದೆ. ಅದರಲ್ಲಿ ನಾಲ್ಕು ಮಂದಿ ಸೊಸೆಯಂದಿರು ಅತ್ತೆಯ ಮನೆಗೆ ಬಂದಿರುತ್ತಾರೆ. ಅತ್ತೆಯು ತನ್ನ ನಾಲ್ಕು ಮಂದಿ ಗಂಡುಮಕ್ಕಳಿಗೆ ಜೋಳದ ದೊಡ್ಡರೊಟ್ಟಿ ಕೊಟ್ಟರೆ, ಸೊಸೆಯಂದಿರಿಗೆ ಮುರಿದ ನುಚ್ಚುನುರಿಯಾದ ರೊಟ್ಟಿಗೆ ಹಿಂಡಿಪುಡಿ ಹಾಕಿ ಕೊಡುತ್ತಿರುತ್ತಾಳೆ. ಎರಡು ತರಕಾರಿ ಪಲ್ಯೆ ಬೇಡ ಒಂದೇ ತರಕಾರಿ ಪಲ್ಯೆ ಮಾಡಿ ಎಂದು ಆಜ್ಞೆ ಮಾಡಿರುತ್ತಾರೆ. ಇವರಲ್ಲಿ ಚಿಕ್ಕಸೊಸೆ ತುಂಬಾ ಚಾಲಾಕಿಯಾಗಿರುತ್ತಾಳೆ. ಆಕೆ ಅತ್ತೆಯನ್ನೇ ಪ್ರಶ್ನೆ ಮಾಡುತ್ತಾಳೆ. ಏಕೆ ರೊಟ್ಟಿಯನ್ನು ಎರಡು ಭಾಗ ವಿಂಡಗಿಸುವಿರಿ ಎಲ್ಲವನ್ನು ಒಂದರಲ್ಲಿ ಹಾಕಿ ಕೊಡಿರಿ ಎಂದು ಹೇಳುತ್ತಾಳೆ. ಆದರೆ ಪರಿಸ್ಥಿತಿ ಸುಧಾರಿಸುವುದಿಲ್ಲ.

ಎಲ್ಲ ದುರ್ಬಲರು ಸಂಕಷ್ಟ ಸಮಯ ಬಂದಾಗ ಉಪಾಯವನ್ನು ಮಾಡುವಂತೆ ಈ ಕಥೆಯಲ್ಲೂ ಸೊಸೆಯರು ತಮ್ಮ ಚಿಕ್ಕ ಆಸೆ ಈಡೇರಿಸಿಕೊಳ್ಳಲು ಉಪಾಯ ಮಾಡುತ್ತಾರೆ.ಒಂದುದಿನ ಅತ್ತೆ ಕೊಡುವ ಕೆಟ್ಟ ಊಟದಿಂದ ಬಾಯಿಕೆಟ್ಟ ಮೂವರೂ ಸೊಸೆಯಂದಿರಿಗೆ ಹುಗ್ಗಿ ತಿನ್ನಬೇಕೆಂದು ಬಯಕೆ ಹುಟ್ಟುತ್ತದೆ. ಆಗ ಚಿಕ್ಕ ಸೊಸೆ ಉಪಾಯ ಮಾಡಿ ನೀರಿಗೆ ಹೋಗಿ ಬರುವಾಗ ನೀರಿನ ಕೊಡ ಎತ್ತಿಹಾಕಿ ಒಡೆದು ಅಳಲಿಕ್ಕೆ ಶುರು ಮಾಡುವಳು. ಅತ್ತೆಯು ಯಾಕೆ ಅಳುತ್ತಿದ್ದಿಯಾ ಎಂದು ಕೇಳಿದಾಗ ನಿಮ್ಮ ಒಬ್ಬಾಕೆ ಮಗಳು ಅನಾರೋಗ್ಯದಿಂದ ಹಾಸಿಗೆ ಹಿಡಿದಿದ್ದಾಳಂತೆ. ಐನೋರು ಹೇಳಿದ್ದಾರೆ ಎಂದು ಸುಳ್ಳು ಹೇಳುವಳು. ಅತ್ತೆಯು ಗಡಿಬಿಡಿಯಲ್ಲಿ ಮಗಳ ಮನೆಗೆ ಓಡಿಬಂದು ನೋಡಿದರೆ, ಮಗಳು ಮನೆಯಲ್ಲಿ ಹುಷಾರಾಗಿಯೇ ಇರುತ್ತಾಳೆ.

ಅಷ್ಟರಲ್ಲಿ ಅತ್ತೆಯ ಮಗಳನ್ನು ನೋಡಿಕೊಂಡು ಬರುವುದರೊಳಗೆ ಸೊಸೆಯಂದಿರು ಗೋಧಿಯ ಹುಗ್ಗಿ ಮಾಡಿ ತುಪ್ಪ ಹಾಕಿಕೊಂಡು ಚೆನ್ನಾಗಿ ತಿನ್ನುತ್ತಾರೆ. ಹೆಚ್ಚಿಗೆ ಉಳಿದುದನ್ನು ಒಯ್ದು ಸೆಗಣಿಯ ಕುರುಳುಗಳ ಗೂಡಿನಲ್ಲಿ ಇಡುತ್ತಾರೆ. 'ನೀಕುಳ್ಳ ತರ್ಲಾಕ ಹೋದಾಗ ನೀ ಉಣ್ಣು, ನಾಕುಳ್ಳು ತರ್ಲಾಕ ಹೋದಾಗ ನಾ ಉಣ್ತೇನಿ' ಎಂದು ಮಾತಾಡಿಕೊಳ್ಳುತ್ತಾರೆ. ಅಷ್ಟರಲ್ಲಿ ಸೊಸೆ ಸುಳ್ಳು ಹೇಳಿದಳು ಎಂದು ಕೋಪಿಸಿಕೊಂಡು ತನ್ನ ಮಗಳ ಮನೆಯಲ್ಲಿ ಏನೂ ಉಣ್ಣದೆ ಅತ್ತೆಯಾದವಳು ಮರಳಿ ಬರುತ್ತಾಳೆ. ನೀವು ಬರುವವರೆಗೆ ನಾವು ಉಪವಾಸ ಇದ್ದೀವಿ ಎಂದು ಅತ್ತೆಗೆ ಸುಳ್ಳು ಹೇಳುವರು.

ಮುಂದೆ ಎಂಟು ದಿನದೊಳಗಾಗಿ ಎಣ್ಣೆ ಹೋಳಿಗೆ ಉಣ್ಣುವ ಆಸೆ ಮತ್ತೊಬ್ಬ ಸೊಸೆಗೆ ಬರುತ್ತದೆ. ಅವಳು ಸಹ ಹೊಸ ಉಪಾಯ ತೆಗೆದು ನೀರಿನ ಕೊಡವನ್ನು ಅಂಗಳದಲ್ಲಿ ಒಡೆದು ಹಾಕಿ ಅಳಲಿಕ್ಕೆ ಶುರುಮಾಡುವಳು. ಮಜ್ಜಿಗೆ ಕಡೆಯುವ ಕೆಲಸ ಬಿಟ್ಟುಬಂದ ಅತ್ತೆಯು ಯಾಕೆ ಅಳುತ್ತಿದ್ದಿಯಾ ಎಂದು ಕೇಳಿದರೆ 'ನಿಮಗ ಒಬ್ಬ ತಮ್ಮ ಇರ್ಲಾಕ ಒಬ್ಬನೆ ಅದಾನೇನು? ಅವನು ಮೈಗೆ ಹುಷಾರಿಲ್ಲದೆ ಮಲ್ಲಗಿದಾನೆ' ಅನ್ನುತ್ತಾಳೆ. ಯಾರು ಹೇಳಿದರು ಅಂತ ಕೇಳಿದಾಗ, ಅಲ್ಲಿ ಒಬ್ಬ ಗಾಡಿಯಂವ ಹೇಳಿ ಹೋದ ಎನ್ನುತ್ತಾಳೆ. ಆಗ ಅತ್ತೆಯು ಮಜ್ಜಿಗೆ ಮಾಡುವುದನ್ನು ಬಿಟ್ಟು ತಮ್ಮ ಊರಿಗೆ ಹೋಗುವಳು. ಆಗ ಎಲ್ಲ ಸೊಸೆಯಂದಿರು ಸೇರಿ ಗೋಧಿತಂದು ಸಜ್ಜಕ ಒಡೆದು ಹೋಳಿಗೆ ಮಾಡಿ ಹೊಟ್ಟೆ ತುಂಬಾ ಉಣ್ಣುವರು. ತಮ್ಮ ಗಂಡಂದಿರಿಗೆ ಪುಡಿಯಾಗಿದ್ದ ರೊಟ್ಟಿ ಖಾರದಪುಡಿ ಉಣ್ಣುವುದಕ್ಕೆ ಕೊಡುವರು. ತಮ್ಮ ತಾಯಿ ಹೆಂಡತಿಯರಿಗೆ ಇಂತಹ ಊಟ ಕೊಡುವಾಗ ಯಾಕೆ ಎಂದು ಪ್ರಶ್ನೆಯನ್ನೇ ಮಾಡದ ಅವರಿಗೂ ತಮ್ಮ ಕಷ್ಟದ ಅನುಭವವಾಗಲಿ ಎಂಬುದು ಸೊಸೆಯಂದಿರ ಉದ್ದೇಶವಾಗಿರುತ್ತದೆ. ಅತ್ತೆ ತನ್ನ ತಮ್ಮನ ಮನೆಗೆ ಹೋದಾಗ ಆತ ಚೆನ್ನಾಗಿ ಕೋಣೆಯಲ್ಲಿ ಕುಳಿತುಕೊಂಡಿದ್ದ. ತಮ್ಮನ ಮನೆಗೆ ಹೋದರೂ ಸಹಿತ ಅವಳ ಮನಸ್ಸೆಲ್ಲಾ ಮನೆಯ ಕಡೆಗೆ ಇರುತ್ತದೆ. ಅತ್ತೆ ಬಂದಾಗ, ' ಐ ಅಕಿ ತೌರ ಮನ್ಯಾಗ ಹುಗ್ಗಿ ಬಾನಾ ಉಂಡು ಬಂದಿದ್ದಾರೆ. ನಾವು ಮುಂಜಾನೆಯಿಂದ ಉಪವಾಸ ಇದ್ದೇವೆ" ಎಂದು ಸುಳ್ಳು ಹೇಳಿ ನಾಲ್ಕು ರೊಟ್ಟಿ ಎಂದು ಉಂಡಂತೆ ಮಾಡುವರು.

ಇನ್ನೊಂದು ಜನಪದ ಕಥೆಯಲ್ಲಿ ಒಬ್ಬ ಸೊಸೆಗೆ ಗೋಧಿರೊಟ್ಟಿಯನ್ನು ತಿನ್ನುವ ಆಸೆಯಾಗುತ್ತದೆ. ಆಕೆ ಮನೆಯಿಂದ ಒಂದಿಷ್ಟು ಹಿಟ್ಟನ್ನು ಕದ್ದುಕೊಂಡು ನೀರು ಸೇದುವ ಬಾವಿಯ ಬಳಿ ಹೋಗಿ, ಕೊಡವನ್ನು ಡಬ್ಬುಹಾಕಿ ಅದರ ಮೇಲೆ ಹಿಟ್ಟಿನಿಂದ ರೊಟ್ಟಿಯನ್ನು ಮಾಡುವಳು. ಅಲ್ಲೇ ಕಟ್ಟಿಗೆ ಸೇರಿಸಿ ಕೆಂಡದ ಮೇಲೆ ರೊಟ್ಟಿಯನ್ನು ಬೇಯಿಸುವಳು. ಸಮೀಪದ ಗುಡಿಯಿಂದ ಯಾರೊ ತುಪ್ಪದ ದೀಪ ಹಚ್ಚಲೆಂದು ಹಾಕಿದ್ದ ಹಸುವಿನ ತುಪ್ಪವನ್ನು ಆ ಬಿಸಿರೊಟ್ಟಿಯ ಮೇಲೆ ಹಾಕಿಕೊಂಡು, ದೇವರ ಮುಂದೆ ಮೀಸಲು ಮುರಿದು ಇಟ್ಟಿದ್ದ

ಬಾಳೆಹಣ್ಣಿನ ಜತೆ ತಿಂದು ಬಾವಿಯಲ್ಲಿ ನೀರುಸೇದಿ ಕುಡಿಯುವ ಕಥೆಯೊಂದಿದೆ. ವಿಶೇಷವೆಂದರೆ, ಇದಕ್ಕೆಲ್ಲ ಸಾಕ್ಷಿಯಾಗಿದ್ದ ಗುಡಿಯಲ್ಲಿರುವ ಕಲ್ಲಿನ ದೇವತಾ ಮೂರ್ತಿಯು ತನ್ನ ಬಾಯಿಯ ಮೇಲೆ ಕೈಯನ್ನು ಇಟ್ಟುಕೊಂಡು ತನ್ನ ಸೋಜಿಗವನ್ನು ವ್ಯಕ್ತಪಡಿಸುವುದು.

ಸೊಸೆಯಂದಿರು ತಮ್ಮ ಅತ್ತೆಯ ವಿರುದ್ಧವೇ ಉಪಾಯಗಳನ್ನು ಹುಡುಕಿ, ಅವಳನ್ನು ವಂಚಿಸಿ, ಸಣ್ಣಪುಟ್ಟ ಸುಖವನ್ನು ಪಡೆಯುವ ಆಶಯವು ಜನಪದ ಕಥೆಗಳಲ್ಲಿ ಮತ್ತೆಮತ್ತೆ ಬರುತ್ತದೆ. ಅಡುಗೆ ಮಾಡುವುದಕ್ಕೆ ಸಾಮಾನು ಇಟ್ಟಿರುವ ದಿನಸಿ ಕೋಣೆಗೆ ಬೀಗ ಹಾಕಿ ಚಾವಿಯನ್ನು ತನ್ನ ಟೊಂಕದಲ್ಲಿ ಇಟ್ಟುಕೊಂಡು, ಆಯಾ ದಿನಕ್ಕೆ ಬೇಕಾದ ವಸ್ತುಗಳನ್ನು ಇಷ್ಟಿಷ್ಟೇ ಕೊಡುವ ಅತ್ತೆಯಂದಿರು ಜನಪದ ಕಥೆಗಳಲ್ಲಿ ಸೊಸೆಯಂದಿರು, ಬೀಗವನ್ನು ಲಪಟಾಯಿಸುವ ಆಶಯವೂ ಸಹ ಪುನರುಕ್ತಿ ಆಗುತ್ತದೆ. ಯಾವ ಕಥೆಯಲ್ಲಿ ಕಾಟಕೊಡುವ ಮೈದುನ ಅಥವಾ ಮಾವಂದಿರ ಪಾತ್ರಗಳು ಬರುವುದಿಲ್ಲ ಮತ್ತು ಅವರನ್ನು ಸೋಲಿಸುವ ಅತ್ತಿಗೆ ಅಥವಾ ಸೊಸೆಯಂದಿರ ಪಾತ್ರಗಳು ಬರುವುದಿಲ್ಲ ಎಂಬುದು ಗಮನಿಸಬೇಕಾದ ವಿಚಾರವಾಗಿದೆ. ಇದು ಮಹಿಳೆಯರ ವಿರುದ್ಧವೆ ಮಹಿಳೆಯರು ಹೋರಾಟ ಮಾಡುವಂತಹ ಭಾರತದ ಕುಟುಂಬ ವ್ಯವಸ್ಥೆಯ ಸಮಸ್ಯೆಯನ್ನು ಇದು ಸೂಚಿಸುತ್ತದೆ. ಈ ಬಗೆಯ ಜನಪದ ಕಥೆಗಳನ್ನು ಜನ ತಮಾಶೆಗಾಗಿ ಕಟ್ಟಿದ್ದರೂ, ಇವುಗಳಲ್ಲಿ ನಮ್ಮ ಸಮಾಜದ ನಮ್ಮ ಕುಟುಂಬ ವ್ಯವಸ್ಥೆಯ ಕೆಲವು ಸತ್ಯಗಳು ಇದ್ದಂತಿವೆ.

ಜನಪದ ಕಥೆಗಳಲ್ಲಿ ಸ್ತ್ರೀಯರ ಚೈತನ್ಯಶೀಲತೆಯನ್ನು ಕುರಿತು ಡಾ. ಸಂಧ್ಯಾರೆಡ್ಡಿಯವರು ಬಹಳ ಒಳ್ಳೆಯ ಚರ್ಚೆಯನ್ನು ಮಾಡುತ್ತಾರೆ. ದಕ್ಷಿಣ ಕರ್ನಾಟಕದ ಜನಪದ ಕಥೆಗಳನ್ನು ಇಟ್ಟುಕೊಂಡು ಅವರು ಚರ್ಚಿಸುತ್ತ "ಸ್ತ್ರೀಯನ್ನು ಕುರಿತಾದ ಕೆಲವು ಕಥೆಗಳಲ್ಲಿ ತಾಯಿ, ಹೆಂಡತಿ ಅಥವಾ ಮಗಳು ಗಂಡ ಅಥವಾ ತಂದೆಯರು ಪರಿಹರಿಸಲಾಗದ ಸಮಸ್ಯೆಗಳನ್ನು ಸಾಹಸ ಕ್ರಿಯೆಗಳ ಮೂಲಕ ಉಪಾಯಗಳ ಮೂಲಕ ಪರಿಹರಿಸುತ್ತಾಳೆ" ಎನ್ನುವರು. ಅವರ ಪ್ರಕಾರ, ಜನಪದ ಕಥೆಗಳಲ್ಲಿ ನಾಯಕಿ ಸಾಮಾನ್ಯ ಮಾನವಳು. ಅವಳ ಆಸೆ ಆಕಾಂಕ್ಷೆ, ಕಷ್ಟ, ಸುಖ, ದುಃಖ, ಸಮಸ್ಯೆಗಳೆಲ್ಲವು ಮಾನವ ಜೀವನದ ಪರಿಮಿತಿಯೊಳಗೆ ಬರುವಂಥವು. ಅಲ್ಲಿ ನಾಯಕಿ ಎದುರಿಸಬೇಕಾಗಿರುವುದು ಅತಿಮಾನುಷ ಅಡಚಣೆಗಳನ್ನಲ್ಲ. ಮಾನವರಲ್ಲೇ ದುಷ್ಟರೂ, ಕ್ರೂರಿಗಳು, ನಿರ್ದಯಿಗಳೂ ವೈರಿಗಳೂ ಆದವರನ್ನು. ಅಂತಹ ಕ್ರೂರ ವ್ಯಕ್ತಿಗಳಿಂದ ತೊಂದರೆಗೊಳಗಾದ ಇಲ್ಲಿನ ಒಳ್ಳೆಯ ವ್ಯಕ್ತಿಗಳು ಅವುಗಳೆಲ್ಲವನ್ನು ನಿವಾರಿಸಿ ಸುಖ ಕಾಣುತ್ತಾರೆ. ಇಲ್ಲವೇ ಸಹನೆಯಿಂದ ಅದೆಲ್ಲವನ್ನು ಸಹಿಸಿಕೊಂಡು ಕೊನೆಗೆ ಸುಖ ಪಡೆಯುತ್ತಾರೆ.

ಮಾನವ ನಾಗರಿಕಥೆಯ ಮೊದಲ ಘಟ್ಟದ ಚರಿತ್ರೆಯನ್ನು ಗಮನಿಸಿದರೆ ಅಲ್ಲಿ ಎದ್ದುಕಾಣುವ ಅಂಶವೆಂದರೆ ಮಹಿಳೆಗೆ ಇದ್ದ ಮಹತ್ವದ ಸ್ಥಾನಮಾನ. ಪ್ರಾಚೀನ ಮಾತೃದೇವತೆಯ ವಿಗ್ರಹಗಳು ಇದಕ್ಕೆ ಸಾಕ್ಷಿ. ಹೆಣ್ಣು ಶಿಶುವನ್ನು ಹಡೆಯುವ ಹಾಗೂ ತನ್ನ ಎದೆಯಿಂದ ಆ

ಮಗುವಿಗೆ ಹಾಲೂಡಿ ಪೋಷಿಸುವ ಮಹಿಳೆಯ ಸೃಜನಶೀಲ ಶಕ್ತಿಯನ್ನು ಕಂಡ ಆದಿಮ ಸಮಾಜವು, ಆಕೆಯನ್ನು ಒಂದು ದೈವವಾಗಿ ಆರಾಧಿಸಲು ಆರಂಭಿಸಿತು. ಇದಕ್ಕೆ ಪೂರಕವಾಗಿ ಆದಿಮ ಸಮಾಜಗಳಲ್ಲಿ ಕೃಷಿ ಮುಂತಾದ ಕಸುಬಿನ ತಿಳುವಳಿಕೆಯೂ ಹೆಚ್ಚಾಗಿ ಮಹಿಳೆಯರ ವಶದಲ್ಲಿತ್ತು. ಇದು ಮಾತೃಪ್ರಧಾನ ಸಮಾಜದ ಕಾಲವಾಗಿದೆ.

ಆದರೆ ಭಾರತೀಯ ಸಮಾಜವು ಚರಿತ್ರೆಯ ಬೇರೆ ಬೇರೆ ಹಂತಗಳಲ್ಲಿ ಹಾಯುತ್ತ ಒಂದು ಪುರುಷ ಪ್ರಧಾನ ಸಮಾಜವಾಗುವಂತಹ ದಿಸೆಯಲ್ಲಿ ಮುನ್ನಡೆಯಿತು. ರಾಜ್ಯಗಳ ಉದಯ, ವ್ಯಾಪಾರಿ ಸಂಸ್ಕೃತಿ, ಕೃಷಿಯ ಉತ್ಪಾದನಾ ವಿಧಾನಗಳಲ್ಲಿ ಆದ ಬದಲಾವಣೆಗಳು, ಖಾಸಗಿ ಆಸ್ತಿಯ ಕಲ್ಪನೆ, ಮಹಿಳೆಯನ್ನು ಹೊರಗಿನ ದುಡಿಮೆಯ ಬದುಕಿನಿಂದ ಮತ್ತು ಸಾರ್ವಜನಿಕ ಭಾಗವಹಿಸುವಿಕೆಯಿಂದ ಹೊರಗಿಡಲ್ಪಡುತ್ತಾ ಹೋದವು. ಸಾಮಾಜಿಕವಾಗಿ ಮಹಿಳೆಯರ ಸ್ಥಾನಮಾನವು ಪುರುಷರಿಗೆ ಹೋಲಿಸಿದರೆ ಕ್ಷೀಣಗೊಳ್ಳುತ್ತ ಹೋಯಿತು. ಹೀಗಾಗಿ ಮಹಿಳೆ ಬದುಕಿ ಉಳಿಯುವುದಕ್ಕಾಗಿ ಮತ್ತು ತನ್ನ ಆಶೋತ್ತರಗಳನ್ನು ಈಡೇರಿಸಿಕೊಳ್ಳುವುದಕ್ಕಾಗಿ ಸಂಘರ್ಷದ ಹಾದಿಯನ್ನು ಹಿಡಿಯಬೇಕಾಯಿತು. ಸಂಘರ್ಷ ಮಾಡಿ ಗೆಲುವನ್ನು ಪಡೆಯಲು ಕಷ್ಟವೆನಿಸಿದಾಗ ಆಕೆ ಉಪಾಯಗಾರಿಕೆಯನ್ನು ಹುಡುಕಿಕೊಳ್ಳಬೇಕಾಯಿತು. ಅದರಲ್ಲೂ ಅವಳ ಲೈಂಗಿಕ ಹಕ್ಕುಗಳ ವಿಷಯದಲ್ಲಿ ಅತಿ ಹೆಚ್ಚು ಪುರುಷ ಪ್ರಧಾನವಾದ ನಿರ್ಬಂಧಗಳು ಹೇರಲ್ಪಟ್ಟವು. ಹೀಗಾಗಿ ಅವಳು ಮತ್ತಷ್ಟು ಪ್ರತಿಭಟನೆಯ ಹಾದಿಗಳನ್ನು ಹುಡುಕಿಕೊಳ್ಳಬಖೇಕಾಯಿತು ಈ ಹಾದಿಗಳಲ್ಲಿ, ಕೆಲವೊಮ್ಮೆ ಆತ್ಮಹತ್ಯೆಯಂತಹ ಮತ್ತು ಪಲಾಯನದ ಹಾದಿಗಳು ಸಹ ಕಾಣಿಸಿಕೊಂಡಿರುವುದುಂಟು. ಆದರೆ ಮಹಿಳೆ ಉಪಾಯಗಾರಿಕೆಯಿಂದ ಕೂಡ ಪುರುಷ ಪ್ರಧಾನ ಸಮಾಜ ವ್ಯವಸ್ಥೆಯ ಹುನ್ನಾರಗಳನ್ನು ಸೋಲಿಸುವ ಕೆಲಸ ಮಾಡತೊಡಗಿದಳು. ಹೀಗಾಗಿ ಕನ್ನಡ ಜನಪದ ಕಥೆಗಳಲ್ಲಿ ಮಹಿಳೆಯರ ಉಪಾಯಗಾರಿಕೆ ಮತ್ತೆ ಮತ್ತೆ ಕಾಣಿಸಿಕೊಳ್ಳುತ್ತೇವೆ.

---

ಅಧ್ಯಾಯ-೫

# ಕಿರಿಯರ ಉಪಾಯಗಾರಿಕೆ ಸ್ವರೂಪ

ವಯಸ್ಸಿನಲ್ಲಿ ಕಿರಿಯರಾದವರ ಬಗ್ಗೆ ಹಿರಿಯರಾದವರು ಪೋಷಕ ಗುಣವನ್ನು ತೋರಿಸುತ್ತಾರೆ. ಅವರಿಗೆ ಉಣ್ಣಿಸುವುದು, ತಿನ್ನಿಸುವುದು, ಪ್ರೀತಿಮಾಡುವುದು, ಸ್ನೇಹದಿಂದ ಇರುವ ಪ್ರಯತ್ನ ಮಾಡುತ್ತಾರೆ. ಆದರೆ ಸ್ವಾತಂತ್ರ ಹಕ್ಕು ಜೀವನದ ಬಗ್ಗೆನಿರ್ಧಾರ ಮಾಡುವ ಹಕ್ಕು ಕೊಡುವುದಿಲ್ಲ. ಅವರಿಗೆ ಅನುಭವವಿಲ್ಲ, ಕಿರಿಯರಿಗೆ ತಿಳುವಳಿಕೆ ಇಲ್ಲ ಎನ್ನುವ ಕಾರಣ. ನಮ್ಮ ರಕ್ಷಣೆ ಮತ್ತು ಪೋಷಣೆಯಲ್ಲಿ ಚಿಕ್ಕವರು ಇರುವುದರಿಂದ ಅವರ ನಿರ್ಣಯವನ್ನು ನಾವೇ ನಿರ್ಧಾರ ತೆಗೆದುಕೊಳ್ಳಬೇಕು. ಅವರ ಬದುಕು ಕುಟುಂಬದ ಬಗ್ಗೆ ಪರಸ್ಪರ ವಿರುದ್ಧ ವಿವಾಹ ಸಂಕೇತ. ಪೋಷಿಸುವ, ಪ್ರೀತಿಸುವ, ರಕ್ಷಿಸುವ ಗುಣ, ಮೂಲ ನೆಲಗಳು, ಹಕ್ಕುಗಳನ್ನು ಹಿರಿಯರಾದವರು ಅವರಿಗೆ ಚಲಾಯಿಸುವುದಕ್ಕೆ ಅವಕಾಶ ಕೊಡುವುದಿಲ್ಲ.

ಈ ಸಾಮಾಜಿಕ ವಾಸ್ತವದಲ್ಲಿ ಕಿರಿಯರಲ್ಲಿ ಒಂದು ಬಗೆಯ ಅಸಹಾಯಕಥೆ ಮತ್ತು ಚಡಪಡಿಕೆ ಮೂಡುತ್ತದೆ. ಅದು ಅವರಲ್ಲಿ ಬಂಡೇಳುವ ಗುಣವನ್ನು ಹುಟ್ಟಿಸುತ್ತದೆ. ಆಗ ಪ್ರತಿಭಟನೆಗಳು ಮತ್ತು ವಿರೋಧಗಳು ಬಹಳಸಲ ಸಾಧ್ಯವಾಗುವುದಿಲ್ಲ. ಅವು ಉಪಯುಕ್ತವೂ ಆಗುವುದಿಲ್ಲ. ಆಗ ಅವರು ತಮ್ಮ ಆಶೋತ್ತರಗಳನ್ನು ಪೂರೈಸಿಕೊಳ್ಳುವುದಕ್ಕೆ, ತಮ್ಮ ಮೇಲಿನ ಹಲ್ಲೆಗಳಿಂದ ಪಾರಾಗುವುದಕ್ಕೆ ಬೇರೆಬೇರೆ ಬಗೆಯ ಉಪಾಯಗಳನ್ನು ಹುಡುಕುತ್ತಾರೆ. ಈ ಉಪಾಯಗಾರಿಕೆಯು ಮೀರಲು ಕಷ್ಟವಾಗಿರುವ ಸಾಮಾಜಿಕ ವಾಸ್ತವವನ್ನು ಮೀರುವುದಕ್ಕಾಗಿ ಹುಟ್ಟುತ್ತದೆ.

ಸಾಮಾಜಿಕವಾದ ಅಡೆತಡೆಗಳು ಇರುವುದರಿಂದಲೇ ಉಪಾಯಗಳು ಹುಟ್ಟುತ್ತವೆ. ತಮ್ಮ ಅಸ್ತಿತ್ವ ಉಳಿಸಿಕೊಳ್ಳುವುದಕ್ಕಾಗಿ ಮತ್ತು, ಬದುಕುಳಿಯುವುದಕ್ಕಾಗಿ ಮಾಡುವ ಉಪಾಯಗಳು, ಹುಟ್ಟುತ್ತವೆ. ಆದರೆ ಉಪಾಯಗಾರಿಕೆಗೆ ವಂಚನೆಯ ಆಯಾಮವೂ ಇದೆ. ಸುಳ್ಳು, ಕಳ್ಳತನಗಳು ಕೂಡ ಉಪಾಯಗಾರಿಕೆಯ ಇತರೆ ಮುಖಗಳು. ಆದ್ದರಿಂದ ಅಸಹಾಯಕರು ಮಾಡುವ

ಉಪಾಯಗಳಿಗೂ ಮತ್ತೊಬ್ಬರ ಅಸಹಾಯಕಥೆ ದಡ್ಡತನ ಮುಗ್ಧತೆಯನ್ನು ಬಳಸಿಕೊಂಡು ವಂಚಿಸುವ ಉಪಾಯಗಾರಿಕೆಗೂ ವ್ಯತ್ಯಾಸಗಳಿವೆ. ಆದರೆ ಈ ಉಪಾಯಗಳನ್ನು ಮತ್ತೊಬ್ಬರನ್ನು ಶೋಷಣೆ ಮಾಡಲು ಬಳಕೆ ಮಾಡುವುದಿಲ್ಲ. ಬದಲಿಗೆ ತಮ್ಮನ್ನು ತಾವು ರಕ್ಷಿಸಿಕೊಳ್ಳುವುದಕ್ಕಾಗಿ, ತಮ್ಮ ಸ್ವಂತಿಕೆ ಉಳಿಸಿಕೊಳ್ಳುವುದಕ್ಕಾಗಿ ಮಾಡುತ್ತಾರೆ. ಆದ್ದರಿಂದಲೇ ದಮನಿತರ ಉಪಾಯಗಾರಿಕೆಯ ಒಳಗಿರುವ ಸುಳ್ಳು, ಕಳ್ಳತನ, ಮೋಸ, ಅಪರಾಧಿ ಅಂಶಗಳಾಗಿರುವುದಿಲ್ಲ. ಇದಕ್ಕೆ ಸಾಕ್ಷಿ ದೇವನೂರ ಮಹಾದೇವ ಅವರ 'ಕುಸುಮಬಾಲೆ'ಯಲ್ಲಿ ಬರುವ ಎಳೆನೀರಿನ ಪ್ರಸಂಗ. ಅಲ್ಲಿ ಗಾರಸಿದ್ಮಾವನು ಸವರ್ಣೀಯ ಭೂಮಾಲೀಕರ ತೋಟದಿಂದ ಹಲವಾರು ಎಳೆನೀರುಗಳನ್ನು ಕಿತ್ತಿರುತ್ತಾನೆ. ವ್ಯವಸ್ಥೆಯ ದೃಷ್ಟಿಯಲ್ಲಿ ಅದು ಅಪರಾಧ. ಆದರೆ ದಲಿತರ ದೃಷ್ಟಿಯಲ್ಲಿ ಅದು ಬದುಕಿ ಉಳಿಯುವುದಕ್ಕೆ ಅವರು ಮಾಡುವ ಅನಿವಾರ್ಯ ಸಾಹಸ. ಈ ಕಾದಂಬರಿಯಲ್ಲಿ ಗಾರಸಿದ್ಮಾವನು ತನ್ನ ಜಾಣತನದಿಂದ ಪಾರಾಗಿ ಬರುವುದನ್ನು ಗಮನಿಸಬಹುದು.

ವಯಸ್ಸಿನಲ್ಲಿ ಚಿಕ್ಕವರಾದವರು ದೊಡ್ಡವರ ಕೆಲಸದಲ್ಲಿ ಮಧ್ಯೆ ಪ್ರವೇಶಿಸಬಾರದು. ಯಾವುದೇ ಸಲಹೆಗಳನ್ನು ಕೊಡಬಾರದು ಎಂಬ ಗ್ರಹಿಕೆಯಿದೆ. ಸಮಾಜವು ಚಿಕ್ಕವರನ್ನು ಕಡೆಗಣಿಸುತ್ತಲೇ ಬಂದಿದೆ. ಹಿರಿಯರ ಇಷ್ಟಕ್ಕೆ ವಿರುದ್ಧ ಹೋದರೆ, ಬೆದರಿಸುವ ಮೂಲಕ ಅವರನ್ನು ನಿಯಂತ್ರಣಕ್ಕೆ ತೆಗೆದುಕೊಳ್ಳಲಾಗುವುದು. 'ಬಡಿಗ್ಯಾನ ಜಾಣತನ' ಎಂಬ ಜನಪದ ಕಥೆಯಲ್ಲಿಯೂ ಮಗನಿಗೆ ಯಾವ ಜವಾಬ್ದಾರಿಯನ್ನು ನೀಡದೆ ಒಬ್ಬ ರಾಜನು ತಂದೆಯಾಗಿ ತನ್ನಿಚ್ಛೆಯನ್ನು ಮಾತ್ರ ನಡೆಸುವ ಸನ್ನಿವೇಶವಿದೆ. ತಂದೆಯು ಮಗನಿಗೆ ಎಲ್ಲಾ ಕೋಣೆಗಳ ಕೀಲಿಕೈ ಕೊಟ್ಟಿದ್ದರೂ ಕೀಲುಕುದುರೆ ಇರುವ ಕೋಣೆಯ ಕೀಲಿ ಮಾತ್ರ ಕೊಡುವುದಿಲ್ಲ. ಇದುವೇ ರಾಜಕುಮಾರನಾದ ಮಗನಿಗೆ ಅತೀವ ಕುತೂಹಲ ಹುಟ್ಟಿಸುತ್ತದೆ. ಆ ಕೋಣೆಯ ಕೀಲಿಕೈ ಹೇಗಾದರೂ ಪಡೆಯಬೇಕೆಂಬ ನಿರ್ಧಾರ ಮಾಡಿದ ಅವನು ತಂದೆ ಮಲಗಿದ ಹೊತ್ತಲ್ಲಿ ಅವನ ಸೊಂಟದಿಂದ ಉಪಾಯವಾಗಿ ಕೀಲಿಯನ್ನು ಹಾರಿಸುತ್ತಾನೆ. ಅಪ್ಪ ನಿಷೇಧಿಸಿದ ಕೋಣೆಯನ್ನು ತೆರೆದು ಸೂತ್ರದಕುದುರೆ ತೆಗೆದುಕೊಂಡು ಕುಳಿತು ಹೊರಟುಬಿಡುತ್ತಾನೆ.

ಈ ಪ್ರಸಂಗವು ಹಿರಿಯರಿಂದ ಕೂಡಿದ ಸಮಾಜವು ಕಿರಿಯರಿಗೆ ಕೆಲವು ಜ್ಞಾನಗಳಿಂದ ದೂರವಿಟ್ಟಿರುವ ಮತ್ತು ಕಿರಿಯರು ಹಿರಿಯರು ತಮ್ಮಿಂದ ಅಡಗಿಸಿದ ಜ್ಞಾನವನ್ನು ಪಡೆಯಲು ಛಲತೊಡುವ ತಲೆಮಾರುಗಳ ಸಂಘರ್ಷದ ಹಾಗೆ ಕಾಣುವುದು. ರಾಜಕುಮಾರನಾದರೂ ಅವನಿಗೆ ಅನೇಕ ಸ್ವಾತಂತ್ರ್ಯಗಳನ್ನು ಅರಮನೆಯ ವ್ಯವಸ್ಥೆಯು ನೀಡಿರುವುದಿಲ್ಲ. ಇದರಿಂದ ಬೇಸತ್ತು ತರುಣ ಮನೆ ತೊರೆಯುತ್ತಾನೆ. ಇದು ಸಿದ್ಧಾರ್ಥನು ತನ್ನಿಂದ ಬೀದಿಯ ಜ್ಞಾನವನ್ನು ಮರೆಮಾಚಿಟ್ಟಿರುವ ಅರಮನೆಯನ್ನು ತೊರೆಯುವುದನ್ನು ಕೊಂಚ ನೆನಪಿಸುತ್ತದೆ. ಮಕ್ಕಳು ಹಿರಿಯರ ಜತೆ ಜಗಳ ಮಾಡುವ, ಮುನಿಸಿಕೊಳ್ಳುವ, ಉಪವಾಸವಿರುವ, ಮನೆ ಬಿಟ್ಟು ಹೋಗುವ ಅನೇಕ ವಿಧಾನಗಳಲ್ಲಿ ತಮ್ಮ ಅತೃಪ್ತಿಯನ್ನು ಪ್ರಕಟಿಸುವರು. ಅವರ ಖಿನ್ನತೆಗೆ

ಕಾರಣವಾದರೂ ಅವರ ತಮ್ಮತನವನ್ನು ಕಂಡುಕೊಳ್ಳಲು ಪರಿಸರವು ಪ್ರತಿಕೂಲವಾಗಿರುವುದೇ ಆಗಿದೆ. ಹೀಗಾಗಿಯೇ ಕಿರಿಯರಲ್ಲಿ ತಂತ್ರಗಾರಿಕೆಗಳು ಮೊಳೆಯುತ್ತವೆ.

ಈ ಕಥೆಯಲ್ಲಿ ರಾಜಕುಮಾರನು ಮನೆಬಿಟ್ಟು ಹೊರಟು ಯಾವುದೊ ಒಬ್ಬ ಮುದುಕಿಯ ಮನೆಯಲ್ಲಿ ಆಶ್ರಯ ಪಡೆಯುತ್ತಾನೆ. ಜನಪದ ಕಥೆಗಳಲ್ಲಿ ಅರಮನೆ ಜತೆ ಸಂಪರ್ಕವಿರುವ ಮುದುಕಿಯರು ತಂತ್ರಗಾರಿಕೆಯ ಇನ್ನೊಂದು ಹೆಸರಾಗಿರುವರು. ರಾಜಕುಮಾರನು ಮುದುಕಿಯ ಮನೆಯಲ್ಲಿ ಆಶ್ರಯ ಪಡೆದು ಅಲ್ಲಿನ ತೋಟದಲ್ಲಿರುವ ಹೂಗಳನ್ನು ತೆಗೆದುಕೊಂಡು ದಾರವಿಲ್ಲದೆ ದಂಡೆಯನ್ನು ಕಟ್ಟುವನು. ತಂದೆಗೆ ಚಳ್ಳೆಹಣ್ಣು ತಿನ್ನಿಸಿ ಕುದುರೆ ವಶಪಡಿಸಿಕೊಂಡ ಹಾಗೂ ಮನೆತೊರೆದು ಹೊರಬಂದ ಬಳಿಕ ತರುಣನು ಹೂದಂಡೆಯ ಮೂಲಕ ತನ್ನ ಜಾಣ್ಮೆಯನ್ನು ಮೊದಲ ಸಲ ಪ್ರಕಟಿಸುವನು. ಮುದುಕಿಯು ಆ ದಂಡೆಯನ್ನು ರಾಜಕುಮಾರಿಗೆ ಕೊಡಲು ರಾಜಕುಮಾರಿ ಈ ದಂಡೆನ್ನು ಯಾರು ಕಟ್ಟಿದಾರೆ. ಚೆನ್ನಾಗಿದೆ ಎಂದು ವಿಚಾರಿಸುವಳು. ಆಗ ಮುದುಕಿಯು ನನ್ನ ಮೊಮ್ಮಗಳು ಕಟ್ಟಿದಳು ಎಂದು ಸುಳ್ಳು ಹೇಳಿ ಪಾರಾಗುವುದಕ್ಕೆ ಉಪಾಯದಿಂದ ಪಾರಾಗುವಳು. ರಾಜಕುಮಾರಿಯು ಆ ಮೊಮ್ಮಗಳನ್ನು ನೋಡಬೇಕೆಂದು ಬಯಸಿದಾಗ ನನ್ನ ಮೊಮ್ಮಗಳಿಗೆ ಸೀರೆ ಕುಬಸಾ ಇಲ್ಲ ಎಂದು ಅವನ್ನೆಲ್ಲವನ್ನು ರಾಜಕುಮಾರಿಯಿಂದ ಪಡೆದುಕೊಂಡು ಬರುವಳು.

ಮುಂದೆ ರಾಜಕುಮಾರಿ ಮುದುಕಿಯ ಮೊಮ್ಮಗನನ್ನು ಇಷ್ಟಪಡುತ್ತಾಳೆ. ಹೂವನ್ನು ಕಟ್ಟುವುದು ಮಹಿಳೆಯರಿಗೆ ಚೆನ್ನಾಗಿ ಬರುತ್ತದೆ. ಇಲ್ಲಿ ರಾಜಕುಮಾರಿಯು ಹೂಕಟ್ಟಿರುವ ವಿಧಾನದಲ್ಲೇ ಇದನ್ನು ಕಟ್ಟಿರುವ ವ್ಯಕ್ತಿ ಪುರುಷನೆಂದು ತಿಳಿದು ಅವನನ್ನು ಕರೆಯಿಸಿಕೊಳ್ಳುವಳು. ಮುಂದೆ ಇಬ್ಬರೂ ಪರಸ್ಪರ ಆಕರ್ಷಣೆಗೆ ಒಳಗಾಗುವರು. ಆದರೆ ತಮ್ಮ ಅಂತಸ್ತಿಗೆ ತಕ್ಕನಲ್ಲದ ವ್ಯಕ್ತಿಯನ್ನು ಅಳಿಯನನ್ನಾಗಿ ಮಾಡಿಕೊಳ್ಳುವುದಕ್ಕೆ ರಾಜನಿಗೆ ಇಷ್ಟವಾಗುವುದಿಲ್ಲ. ಅಷ್ಟರಲ್ಲಿ ರಾಜಕುಮಾರಿ ಗರ್ಭಿಣಿ ಆಗಿರುತ್ತಾಳೆ. ರಾಜಕುಮಾರನು ತನ್ನ ತಂದೆಯ ಇಚ್ಛೆಗೆ ವಿರುದ್ಧವಾಗಿ ಕುದುರೆಯ ಕೋಣೆಯನ್ನು ಪ್ರವೇಶಿಸಿದರೆ, ಇಲ್ಲಿ ರಾಜಕುಮಾರಿಯು ತನ್ನ ತಂದೆಯ ಇಷ್ಟಕ್ಕೆ ವಿರುದ್ಧವಾಗಿ ಅಪರಿಚಿತ ತರುಣನನ್ನು ಪ್ರೀತಿಸುವಳು. ಈ ಎರಡು ಪ್ರಸಂಗಗಳು ಕಿರಿಯ ತಲೆಮಾರಿನ ಉಪಾಯಗಾರಿಕೆಯನ್ನು ಮಾತ್ರವಲ್ಲದೆ, ಅವರ ದುಡುಕನ್ನು ಸಹ ಹೇಳುವುದು. ಸಮಾಜದ ಅಪವಾದಕ್ಕೆ ಹೆದರದೆ ರಾಜಕುಮಾರಿ ಗರ್ಭಧರಿಸುವುದು ಅವರ ನಿಯಂತ್ರಣ ತಪ್ಪಿದ ಕಾಮನೆಯ ಸಂಕೇತ ಮಾತ್ರವಲ್ಲ. ಲೋಕವನ್ನು ಮುಖಾಮುಖಿ ಮಾಡುವ ದಿಟ್ಟತನದ ಕ್ರಿಯೆ ಕೂಡ ಆಗಿದೆ. ತಮ್ಮ ಇಷ್ಟದಂತೆ ಬದುಕಬೇಕು ಎಂಬ ಕಿರಿಯ ತಲೆಮಾರಿನ ಹಠವನ್ನು ಹಾಗೂ ಅವರು ಹಿರಿಯ ಎದುರು ಮೊಳಗಿಸಿದ ಬಂಡಾಯವನ್ನು ಈ ಘಟನೆಯಲ್ಲಿ ನೋಡಬಹುದು.

ಜನಪದ ಕಥೆಗಳಲ್ಲಿ ಪ್ರಾಮಾಣಿಕಥೆ ಇರುವವರಿಗೆ ಕಿರಿಯರಿಗೆ ಕಷ್ಟಕಾಲದಲ್ಲಿ ದೈವವು ಸಹಾಯಕ್ಕೆ ಬರುತ್ತವೆ. ರಾಜಕುಮಾರನು ಸೂತ್ರದ ಕುದುರೆಯ ಮೂಲಕ ರಾಜಕುಮಾರಿಯನ್ನು ಅರಮನೆಯಿಂದ ಹೊರಗೆ ಕರೆದುಕೊಂಡು ದೇಶಾಂತರ ಹೋಗುತ್ತಾನೆ. ಆದರೆ ಕುಟುಂಬದ ಅದರಲ್ಲೂ ಅರಮನೆಯ ಮೌಲ್ಯಗಳಿಗೆ ವಿರುದ್ಧವಾಗಿ ನಡೆದುಕೊಳ್ಳುವ ಹೊಸತಲೆಮಾರಿನ ಈ ಪ್ರೇಮಿಗಳಿಗೆ ಕಷ್ಟಗಳ ಪರಂಪರೆ ಆರಂಭವಾಗುತ್ತದೆ. ಸಮಾಜವು ಅವರನ್ನು ನೋಡುವ ದೃಷ್ಟಿಕೋನ ಬೇರೆಯೇ ಆಗುತ್ತದೆ. ಈ ಕಷ್ಟಪರಂಪರೆಗಳು ಅವರ ಕ್ರಿಯಾಶೀಲತೆಯನ್ನು ಬಡಿದೆಬ್ಬಿಸುತ್ತವೆ. ಗರ್ಭಿಣಿಯಾದ ರಾಜಕುಮಾರಿಗೆ ಹೆರಿಗೆ ಬೇನೆ ಎದ್ದು, ಮಗು ಹುಟ್ಟುತ್ತದೆ. ಬಾಣಂತಿಗೆ ಬೇಕಾದ ಶಾಖಕೊಡಲು ಬೆಂಕಿ ತರಲು ಹೋಗುವ ರಾಜಕುಮಾರನ ಸೂತ್ರದ ಕುದುರೆಯ ಸೂತ್ರವು ಹಾದಿಮಧ್ಯದಲ್ಲಿಯೇ ಕೈಕೊಡುತ್ತದೆ. ಎಲ್ಲಿ ಬೇಕಲ್ಲಿ ಹಾರುವ ಸೌಲಭ್ಯವನ್ನು ಅವನು ಕಳೆದುಕೊಳ್ಳುವನು.

ಹೆತ್ತ ಮಗುವಿನೊಂದಿಗೆ ತನ್ನ ಗಂಡನ ದಾರಿ ನೋಡಿ ನೋಡಿ ಗಾಬರಿಯಾಗಿ ರಾಜಕುಮಾರಿಯು ಮಗುವನ್ನು ತೆಗೆದುಕೊಂಡು ತನ್ನ ಊರದಾರಿ ಹಿಡಿಯುವಳು. ಬಾಯಾರಿಕೆಯಾದಾಗ ಒಂದು ತೋಟದ ಬಾವಿಗೆ ಬಂದು, ಕೂಸನ್ನು ತೋಟದ ಹೂಗಾರನ ಕೈಗೆ ಕೊಟ್ಟು ನೀರು ಕುಡಿಯಲು ಇಳಿಯುವಳು. ಆ ಹೂಗಾರನಿಗೆ ಮಕ್ಕಳು ಇರಲಿಲ್ಲ. ಅವಳ ಮಗುವನ್ನು ತೆಗೆದುಕೊಂಡು ಮನೆಗೆ ಓಡಿ ಹೋಗುವನು. ರಾಜಕುಮಾರಿಯು ಕಂಗೆಟ್ಟು ಆ ಊರಲ್ಲಿಯೇ ಉಳಿದುಬಿಡುವಳು. ಮುಂದೆ ಆಕೆಯ ಮಗ ದೊಡ್ಡವನಾಗಿ ಲಗ್ನಕ್ಕೆ ಬರುತ್ತಾನೆ. ಆಗ ಆ ಮನೆಯಲ್ಲಿದ್ದ ಹೂಗಾರ ಮುದುಕಿ ಅವನೊಬ್ಬ ಅನಾಥನೆಂದು ತಿಳಿಸುವಳು. ಅವನಿಗೆ ತನ್ನ ತಂದೆ ತಾಯಿ ಹುಡುಕಬೇಕು ಅನಿಸುತ್ತದೆ. ತಾಯಿ ಸಿಕ್ಕಾಗ ವಿಷಯವೆಲ್ಲ ತಿಳಿದ ತರುಣನು ತಲವಾರ ತೆಗೆದುಕೊಂಡು ಹೂಗಾರನನ್ನೂ ಅವನ ಹೆಂಡತಿಯನ್ನೂ ಕಡಿದುಬಿಡುತ್ತಾನೆ.

ಈ ಕಥೆಯಲ್ಲಿ ಮುದುಕಿ ರಾಜ ಮುಂತಾದ ಪಾತ್ರಗಳಿದ್ದರೂ, ನಿಜವಾಗಿಯೂ ಮುಖ್ಯವಾದುದು ಹೊಸತಲೆಮಾರಿನ ತರುಣರ ಸಾಹಸಗಳು. ಅವರು ಮಾಡುವ ಉಪಾಯಗಳು. ಅವರು ತೋರುವ ದಿಟ್ಟತನಗಳು. ಅವರು ತಮ್ಮ ಸಾಹಸ ಪ್ರವೃತ್ತಿಯಿಂದ ಕಷ್ಟಕ್ಕೆ ಈಡಾದಾಗ, ಅವರಿಗೆ ಪ್ರಾಣಿಗಳು ನೆರವಾಗುತ್ತವೆ. ಈ ಕಥೆಯಲ್ಲಿ ಒಂದು ಆಕಳು ರಾಜಕುಮಾರಿಗೆ ಸಹಾಯ ಮಾಡುತ್ತದೆ. ಈ ಕಥೆಯಲ್ಲಿ ಮೂಕ ಪ್ರಾಣಿಗಳಿಗಿರುವ ಮಮತೆ ಮನುಷ್ಯರಿಗೆ ಇಲ್ಲ ಎಂಬ ಧ್ವನಿಯೂ ಇದೆ. ಕಿರಿಯ ರಾಜಕುಮಾರನು ತನ್ನ ತಾಯಿಯನ್ನು ಪಡೆದ ಬಳಿಕ ತನ್ನ ತಂದೆಯ ಹುಡುಕಾಟ ಆರಂಭಿಸುವನು. ತಂದೆಯೆಂದು ಗೊತ್ತಿಲ್ಲದೆ ಅವನ ಹತ್ತಿರವೇ ಹೋಗಿ ಮುತ್ಯಾ ಮುತ್ಯಾ ನನಗೆ ಒಂದು ಕಥೆ ಹೇಳು ಎಂದು ಕೇಳುವನು. ಆಗ ಕಿರಿಯ ರಾಜಕುಮಾರನ ತಂದೆಯು ಸೂತ್ರದ ಕುದುರೆಯನ್ನು ಕಳೆದುಕೊಂಡ ಕಥೆಯನ್ನೇ ಹೇಳುವನು. ಆಗ ಅವನಿಗೆ ನನ್ನ ತಂದೆ ಎಂದು ಗುರುತಾಗುತ್ತದೆ.

ಬಡವರಾದವರು ತಮ್ಮ ಮಕ್ಕಳಿಗೆ ಶಿಕ್ಷಣ ನೀಡಲು ಹಗಲಿರುಳು ಶ್ರಮಿಸುತ್ತಿರುತ್ತಾರೆ. ತಾವು ಪಟ್ಟ ಪಾಡು ಕಷ್ಟ ತಮ್ಮ ಮಕ್ಕಳಿಗೆ ಬಾರದಿರಲಿ ಎಂದು ತಮ್ಮ ಕಷ್ಟವನ್ನು ಲೆಕ್ಕಿಸಿದೆ, ನೋವನ್ನು ಸಹಿಸಿಕೊಂಡು ಮಕ್ಕಳು ಭವಿಷ್ಯಕ್ಕಾಗಿ ತುಡಿಯುತ್ತಾರೆ. ಕಿತ್ತು ತಿನ್ನುವ ಬಡತನದಲ್ಲಿಯೂ ಅಕ್ಷರದ ಜ್ಞಾನ ನೀಡಬೇಕೆಂದು ಶಾಲೆಗೆ ಕಳುಹಿಸಲು ತವಕಿಸುತ್ತಾರೆ. ಆದರೆ ಕೆಲವೊಮ್ಮೆ ಹೀಗೆ ಕಲಿತ ಹುಡುಗರು ತಮ್ಮ ತಂದೆತಾಯಿಗಳ ಆಶೋತ್ತರಗಳನ್ನು ಈಡೇರಿಸುವಲ್ಲಿ ಸೋಲುತ್ತಾರೆ. ನಿರಾಶೆ ಮಾಡುತ್ತಾರೆ. ಆದರೆ ಕೆಲವು ಮಕ್ಕಳು ಮಾತ್ರ ತಮ್ಮ ಮುಗ್ಧ ಮತ್ತು ದಡ್ಡ ತಂದೆ ತಾಯಿಗಳಿಗೆ ಕೀರ್ತಿ ಸಂಪತ್ತು ತರುವ ಕೆಲಸ ಮಾಡುವರು. ಇದನ್ನು 'ಹುಡುಗನ ಜಾಣತನ' ಕಥೆಯಲ್ಲಿ ನೋಡಬಹುದು. ಕಥೆಯ ಹೆಸರೇ ಹುಡುಗನ ಜಾಣ್ಮೆಯನ್ನು ಸೂಚಿಸುತ್ತಿದೆ.

ಈ ಕಥೆಯ ಸಂಕ್ಷಿಪ್ತವಾದ ಸಾರವಿದು. ಒಬ್ಬ ಸಂನ್ಯಾಸಿಯು ಒಬ್ಬ ಬಡವ್ಯಕ್ತಿಯ ಒಬ್ಬ ಸನ್ಯಾಸಿಯನ್ನು ನೋಡಿ ತನ್ನ ಇಬ್ಬರು ಮಕ್ಕಳನ್ನು ಶಿಷ್ಯರಾಗಿ ಸ್ವೀಕಾರ ಮಾಡಿ ವಿದ್ಯೆ ಕಲಿಸಿಕೊಡಬೇಕೆಂದು ಬೇಡಿಕೊಳ್ಳುವನು. ಜಾಣರಾದರೆ ನಮಗ ಒಪ್ಪಿಸಿರಿ. ದಡ್ಡನಾದರೆ ನೀವೇ ಇಟ್ಟುಕೊಳ್ಳಿ ಎಂದು ಶರತ್ತು ಕೂಡ ಹಾಕುತ್ತಾನೆ. ಅದರ ಪ್ರಕಾರ ಸನ್ಯಾಸಿಯು ಇಬ್ಬರೂ ಮಕ್ಕಳಿಗೆ ವಿದ್ಯೆ ಕಲಿಸುತ್ತಾನೆ. ಆದರೆ ಅವರಲ್ಲಿ ಹಿರಿಯ ಹುಡುಗನು ದಡ್ಡನಿರುತ್ತಾರೆ. ಕಿರಿಯನು ಜಾಣನಿರುತ್ತಾನೆ. ಜನಪದ ಕಥೆಗಳಲ್ಲಿ ಯಾವಾಗಲೂ ಕಿರಿಯ ವಯಸ್ಸಿನವರೇ ಸಾಹಸಿಗರು. ಸನ್ಯಾಸಿಯು ಹಿರಿಯ ಹುಡುಗನಿಗೆ ಹಗಲು ಹೊತ್ತು ಪಾಠ ಹೇಳಿಕೊಟ್ಟರೆ, ಕಿರಿಯ ಹುಡುಗನಿಗೆ ರಾತ್ರಿ ಹೊತ್ತಲ್ಲಿ ತನ್ನಲ್ಲಿರುವ ಅಪೂರ್ವವಾದ ಮಂತ್ರತಂತ್ರಗಳ ವಿದ್ಯೆ ಕಲಿಸುತ್ತಾನೆ. ಇದರ ಪರಿಣಾಮವಾಗಿ ಚಿಕ್ಕವನು ಜಾಣನಾದರೆ ದೊಡ್ಡವನು ಮಾತ್ರ ದಡ್ಡನಾಗುತ್ತಾನೆ. ಒಂದು ದಿನ ಮಕ್ಕಳ ತಂದೆಯು ತನ್ನ ಮಕ್ಕಳನ್ನು ಮರಳಿ ಕರೆದೊಯ್ಯಲು ಬಂದಾಗ, ಸಂನ್ಯಾಸಿಯು ಚಿಕ್ಕವನನ್ನು ತನ್ನಲ್ಲಿ ಉಳಿಸಿಕೊಳ್ಳಲು ಒಂದು ಉಪಾಯ ಮಾಡುವನು. ದೊಡ್ಡ ಹುಡುಗನಿಗೆ ಹೊಸ ವಸ್ತ್ರಗಳನ್ನು ತೋಡಿಸಿ ಅವನ ಹತ್ತು ಬೆರಳಿಗೆ ಬಂಗಾರದ ಉಂಗುರ ತೊಡಿಸಿ ಮಂಚದ ಮೇಲೆ ತೂಗುವಂತೆ ಮಾಡುವನು. ಸಣ್ಣವನಿಗೆ ಹರಿದ ಅಂಗಿ ತೊಡಿಸಿ ಹೂವಿನ ಗಿಡಕ್ಕೆ ನೀರು ಹಾಕುವುದಕ್ಕೆ ಹಚ್ಚುವನು. ಆಗ ಮಕ್ಕಳ ತಂದೆಯು ತೂಗುಮಂಚದ ಮೇಲಿರುವ ಮಗನನ್ನು ನೋಡಿ ಇವನನ್ನೇ ಕರೆದೊಯ್ಯಬೇಕೆಂದು ನಿಶ್ಚಯ ಮಾಡುತ್ತಾನೆ. ಅವನ ಮೈಯಲ್ಲಿದ್ದ ಆಭರಣಗಳು ಕೂಡ ಅವನ ಆಯ್ಕೆಯನ್ನು ನಿರ್ಧರಿಸಿರುತ್ತವೆ. ಇದಕ್ಕೆ ತಕ್ಕಂತೆ ಅವನ ಹೆಂಡತಿಯ ದೊಡ್ಡಮಗ ದಡ್ಡ ಇದ್ದರೆ ಇರಲ್ಯಾಕ ಅವನನ್ನೇ ಕರೆದುಕೊಂಡು ಬನ್ನಿ ಎಂದಿರುತ್ತಾಳೆ. ಅದರಂತೆ ತಂದೆ ದೊಡ್ಡಮಗನನ್ನು ಕರೆದುಕೊಂಡು ಹೊರಡುತ್ತಾನೆ. ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ ಕಿರಿಯ ಮಗನು ತನ್ನ ತಾಯಿಯಿಂದಲೂ ನಿರಾಕರಣೆಗೆ ಒಳಗಾಗಿರುವುದು. ಸಮಾಜ ಇಲ್ಲವೇ ಕುಟುಂಬದಿಂದ ಆಗುವ ಅನಾಥಪ್ರಜ್ಞೆಯೇ ಕಿರಿಯರಲ್ಲಿ ಛಲವನ್ನು ಹುಟ್ಟಿಸುವುದು. ಏನಾದರೂ ಸಾಧನೆ ಮಾಡುವಂತೆ ಮಾಡುವುದು.

ಇತ್ತ ಮಾಯಾವಿ ಸಂನ್ಯಾಸಿಯು ರಾತ್ರಿಯ ಹೊತ್ತಿನಲ್ಲಿ ತನ್ನ ತಂತ್ರವಿದ್ಯೆಯ ಬಲದಿಂದ ದೊಡ್ಡವನು ತೊಟ್ಟುಕೊಂಡು ಹೋಗಿದ್ದ ಒಡವೆಗಳೆಲ್ಲವನ್ನು ಮರಳಿ ಪಡೆಯುತ್ತಾನೆ. ಆಗ ಹುಡುಗನ ತಂದೆಗೆ ಬಡತನ ಬರುತ್ತದೆ. ಸಮಾಜದಲ್ಲಿ ಅವನ ಅಂತಸ್ತು ನಗೆಪಾಟಲಿಗೆ ಈಡಾಗುತ್ತದೆ.

ಈಗ ಕಥೆಗೆ ನಾಟಕೀಯ ತೀವ್ರತೆ ಬರುತ್ತದೆ. ಸನ್ಯಾಸಿಯ ಜತೆ ಉಳಿದ ಚಿಕ್ಕವನು ತನ್ನ ಗುರುವು ತಂದೆಗೆ ಮೋಸಮಾಡಿದಕ್ಕೆ ಪ್ರತಿಯಾಗಿ ಅವನಿಗೆ ಬುದ್ಧಿಕಲಿಸಲು ನಿರ್ಧರಿಸುತ್ತಾನೆ. ಅದರ ಪ್ರಕಾರ, ತನ್ನ ತಂದೆಯ ಬಳಿ ಬಂದು ತಾನು ಹೇಳಿದಂತೆ ಕೇಳಬೇಕೆಂದು ಒಪ್ಪಿಸಿ, ಕೆಲವು ಉಪಾಯ ಹೇಳಿಕೊಡುತ್ತಾನೆ. ಅದರ ಪ್ರಕಾರ ಚಿಕ್ಕಹುಡುಗನು ಮಂತ್ರವಿದ್ಯೆಯಿಂದ ಹೋರಿ ಆಗುತ್ತಾನೆ. ಅವನ ಅಪ್ಪನು ಹೋರಿಯನ್ನು ಸಂತೆಯಲ್ಲಿ ಮಾರಿ ಹಣವನ್ನು ಪಡೆಯುತ್ತಾನೆ. ಆದರೆ ರೂಪಬದಲಾವಣೆಯ ವಿದ್ಯೆ ಗೊತ್ತಿದ್ದ ಚಿಕ್ಕವನು ಒಂದು ಗುಂಗಿ ಹುಳುವಾಗಿ ಮನೆಗೆ ವಾಪಸ್ಸು ಬರುತ್ತಾನೆ.

ಎರಡನೆಯ ದಿನ ಚಿಕ್ಕವನು ದೊಡ್ಡ ಎಮ್ಮೆ ಆಗಿ ಬದಲಾಗುತ್ತಾನೆ. ಅವನ ಅಪ್ಪನು ಅವನನ್ನು ದನದ ಸಂತೆಗೆ ಒಯ್ದು ಒಬ್ಬ ಸಾಹುಕಾರನಿಗೆ ಮಾರುತ್ತಾನೆ. ಚಿಕ್ಕವನು ಎಮ್ಮೆಯ ರೂಪದಲ್ಲಿ ಎರಡು ದಿನವಿದ್ದು ಮೂರನೇ ದಿನ ಗುಂಗಿ ಹುಳುವಾಗಿ ತನ್ನ ಮನೆಗೆ ಮರಳುತ್ತಾನೆ. ಹೀಗೆ ದಿನೇದಿನೇ ಬಡಕುಟುಂಬವು ಚಿಕ್ಕಮಗನ ಚಾತುರ್ಯದಿಂದ ಸಿರಿವಂತಿಕೆ ಪಡೆಯುತ್ತ ಹೋಗುತ್ತದೆ.

ಮೂರನೆಯ ದಿನ ಚಿಕ್ಕವನು ಏಳುಗೇಣಿನ ಕುದುರೆಯಾಗಿ ಬದಲಾಗುತ್ತಾನೆ. ಎಂದಿನಂತೆ ಅವರ ಅಪ್ಪನು ಸಂತೆಗೆ ಒಯ್ದು ಮಾರಲು ಯತ್ನಿಸುತ್ತಾನೆ. ಆಗ ಚಿಕ್ಕವನ ಗುರುವಾದ ಸಂನ್ಯಾಸಿಯು ಕುದುರೆರೂಪದಲ್ಲಿರುವ ತನ್ನ ಶಿಷ್ಯನನ್ನು ಗುರುತು ಹಿಡಿದು ಅವನನ್ನು ಖರೀದಿ ಮಾಡಿಬಿಡುತ್ತಾನೆ. 'ಸಿಕ್ಕ್ಯಾ ನನ್ನ ಮಗನ' ಎಂದು ಅವನ ಮೇಲೇರಿ ಸವಾರಿ ಮಾಡಲಾರಂಭಿಸುತ್ತಾನೆ. ಈಗ ಚಿಕ್ಕವನು ಕಷ್ಟಕ್ಕೆ ಸಿಲುಕಿದಂತಾಯಿತು.

ಕಥೆಗೆ ಮೂರನೆಯ ಸಲ ನಾಟಕೀಯ ತಿರುವು ಬರುತ್ತದೆ. ಇದು ಬರುವುದು ಸನ್ಯಾಸಿ ಬಾವಾನ ಜತೆ ಕಿರಿಯನು ಸ್ಪರ್ಧೆಯಲ್ಲಿ ಮಾಡುವ ಮಾಟಮಂತ್ರದ ವಿದ್ಯೆಯಿಂದ. ಕುದುರೆಯ ಮೇಲಿದ್ದ ಸನ್ಯಾಸಿಯಿಂದ ತಪ್ಪಿಸಿಕೊಳ್ಳಲು ಕಿರಿಯನು ಒಂದು ಬಾವಿ ಬಂದಾಗ ಮೀನಿನ ರೂಪತಾಳಿ ಜಿಗಿಯುವನು. ಇದರಿಂದ ವಿಚಲಿತನಾದ ಸಾಧು ಆ ಬಾವಿಯ ಮಾಲೀಕನಾದ ಕುಂಬಾರನನ್ನು ಭೇಟಿಯಾಗಿ ಐದನೂರು ಹಣಕೊಟ್ಟು ಹೂಳು ತೆಗೆಯುವುದಕ್ಕೆ ಹೇಳುವನು. ನೀರನ್ನು ಬಾವಿಯಿಂದ ಮೇಲಕ್ಕೆ ತೆಗೆಯುವಾಗ ಅಕಸ್ಮಾತ್ ಕೋಣವು ನೀರು ಕುಡಿಯುವುದಕ್ಕೆ ಬರುತ್ತದೆ. ಆಗ ಚಿಕ್ಕವನು ಆ ಕೋಣದ ಹೊಟ್ಟೆಯಲ್ಲಿ ಮೀನಾಗಿ ಸೇರಿಬಿಡುತ್ತಾನೆ. ಬಾವಾಜಿಯು ಆ ಕೋಣವನ್ನು ಕೊಂಡು ಅದರ ಹೊಟ್ಟೆ ಸೀಳುವಾಗ, ಚಿಕ್ಕವನು ಗಿಳಿಯಾಗಿ

ಹಾರಿ ಹೋಗುತ್ತಾನೆ. ಗಿಳಿಯು ಅರಮನೆಗೆ ಹೋಗುತ್ತದೆ. ಅಲ್ಲಿನ ರಾಜಕುಮಾರಿ ಈ ಗಿಳಿಯನ್ನು ಇಷ್ಟಪಡುತ್ತಾಳೆ. ಮಾರನೆಯ ದಿನ ಬಾವಾಜಿಯು ವೇಷ ಬದಲಾಯಿಸಿಕೊಂಡು ಅರಮನೆಗೆ ಹೋಗುವನು. ರಾಜನು ಬಾವಾಜಿಗೆ ಏನು ಬೇಕು ಎಂದಾಗ, ನಿಮ್ಮ ಮಗಳ ಬಳಿಯಿರುವ ಮಾತಾಡುವ ಗಿಳಿಕೊಡಿ ಎಂದು ಬೇಡಿಕೆ ಇಡುತ್ತಾನೆ. ಆದರೆ ಗಿಳಿಯು ಬಾವಾನ ಕೈಗೆ ದಕ್ಕುವುದಿಲ್ಲ. ಕಿರಿಯನು ಗಿಳಿಯ ರೂಪಬಿಟ್ಟು ಹವಳವಾಗಿ ನೆಲಕ್ಕೆ ಬೀಳುವನು. ಆ ಹವಳವನ್ನು ತಿನ್ನಲು ಬಾವಾಜಿಯು ಕೋಳಿಯಾಗಿ ತಿನ್ನಲು ಯತ್ನಿಸುವನು. ಆಗ ಕೂಡಲೇ ಚಿಕ್ಕವನು ಬೆಕ್ಕಾಗಿ ಕೋಳಿ ರೂಪದಲ್ಲಿದ್ದ ತನ್ನ ಗುರುವನ್ನು ತಿಂದು ಮುಗಿಸುವನು.

ಈಗ ಕಥೆಗೆ ಕೊನೆಯ ನಾಟಕೀಯ ತಿರುವು ಬರುತ್ತದೆ. ಕಿರಿಯವನು ಈಗ ಮೊದಲಿನ ರೂಪಕ್ಕೆ ಮರಳುತ್ತಾನೆ. ರಾಜಕುಮಾರಿಯನ್ನು ಮದುವೆಯಾಗಿ ಸುಖವಾಗಿ ಬದುಕುತ್ತಾನೆ.

ಈ ಕಥೆಯಲ್ಲಿ ಇರುವ ಉಪಾಯಗಾರಿಕೆಯ ವಿಶೇಷತೆ ಎಂದರೆ, ಸಹಜವಾದ ಮಾನವ ಬುದ್ಧಿವಂತಿಕೆಯಿಂದ ಅದು ಹುಟ್ಟುವುದಿಲ್ಲ. ಅದು ಮಂತ್ರವಿದ್ಯೆಯ ನೆರವಿನಿಂದ ಹುಟ್ಟುತ್ತದೆ. ಕಿರಿಯವನ ಉಪಾಯಗಾರಿಕೆಯು ಮೂರು ಉದ್ದೇಶಗಳನ್ನು ಸಾಧಿಸುತ್ತದೆ. ಒಂದು ತನ್ನ ತಂದೆತಾಯಿಯರ ಬಡತನವನ್ನು ನಿವಾರಿಸುವದು. ತಮ್ಮ ಕುಟುಂಬಕ್ಕೆ ಮೋಸಮಾಡಿದ ಗುರುವಿಗೆ ಬುದ್ಧಿಕಲಿಸುವುದು. ಮೂರನೆಯದಾಗಿ ರಾಜಕುಮಾರಿಯನ್ನು ಲಗ್ನವಾಗುವುದು. ಈ ಉಪಾಯಗಾರರ ಕಥೆಗಳು ಯುಕ್ತಿ ಮತ್ತು ವಿದ್ಯೆಗಳು ಇದ್ದರೆ, ವಯಸ್ಸು ಚಿಕ್ಕದಾದರೂ ಜಗತ್ತನ್ನೇ ಗೆಲ್ಲಬಹುದು ಎಂದು ತಿಳಿಸಿಕೊಡುತ್ತವೆ.

ಚಿಕ್ಕವರಾದವರಿಗೆ ತಮ್ಮ ಹಿಡಿದ ಕೆಲಸ ಮಾಡಬೇಕೆಂಬ ಹಟಮಾರಿತನ ಇರುತ್ತದೆ. ಮನೆಯಲ್ಲಿ ಹಿರಿಯರು ಹೇಳಿದ ಮಾತಿಗೆ ಮನ್ನಣೆ ನೀಡದೆ ತಮ್ಮದೇ ಆದ ಸ್ವಾತಂತ್ರವನ್ನು ಅವರು ಚಲಾಯಿಸಲು ಹವಣಿಸುತ್ತಾರೆ. 'ಬೇಡಿದ್ದು ಕೊಡುವ ಉಂಗುರ' ಎಂಬ ಕಥೆಯಲ್ಲಿ ಒಬ್ಬ ವ್ಯಕ್ತಿ ಕುರುಡನಾಗಿದ್ದು ತನ್ನ ಏಕೈಕ ಚಿಕ್ಕಮಗನನ್ನು ತುಂಬಾ ಮುದ್ದಾಗಿ ಸಾಕಿರುತ್ತಾನೆ. ಚಿಕ್ಕಮಕ್ಕಳು ಅತಿ ಹೆಚ್ಚಾಗಿ ಪ್ರಾಣಿ ಪಕ್ಷಿಗಳ ಜತೆ ಆಡುವುದಕ್ಕೆ ಬಯಸುತ್ತಾರೆ. ತಮಗೆ ಇಷ್ಟವಾದ ವಸ್ತು ಕಣ್ಣಿಗೆ ಬಿದ್ದರೆ ಅದನ್ನು ಪಡೆದೇ ತೀರುವ ಛಲ ಅವರಲ್ಲಿ ಹುಟ್ಟುತ್ತದೆ. ತಮ್ಮ ಪ್ರಾಣಕ್ಕೆ ಕುತ್ತು ಬರುವ ಸಂಭವವಿದ್ದರೂ ಅವರು ಹಿಂಜರಿಯುವುದಿಲ್ಲ. ಅದರಂತೆ ಈ ಕಥೆಯಲ್ಲಿ ಚಿಕ್ಕಹುಡುಗನು ಐನೂರು ರೂಪಾಯಿ ತೆಗೆದುಕೊಂಡು ಹಾವು ಬೆಕ್ಕು ಹಾಗೂ ಗಿಳಿಯನ್ನು ಖರೀದಿ ಮಾಡಿ ತರುತ್ತಾನೆ. ಆ ಹುಡುಗನ ತಂದೆ ಕುರುಡನಾಗಿದ್ದರಿಂದ ಮಗನು ತಂದ ವಸ್ತುಗಳನ್ನು ಯಾವುದು ಎಂದು ಅವನಿಗೆ ತಿಳಿಯುವುದಿಲ್ಲ. ಈ ಹುಡುಗನಿಗೂ ತಾನು ತಂದ ವಸ್ತು ಯಾವುದು ಎಂಬುದು ಗೊತ್ತಿರುವುದಿಲ್ಲ. ಉದ್ದನೆಯದಿದೆ, ಮೈ ಹಸುರಾಗಿದೆ, ಅದರ ಬಾಯಿ ಕೆಂಪಗಿದೆ ಎಂದು ಅಂದಾಜಿನ ಮೇಲೆ ಅವುಗಳ ವರ್ಣನೆ

ಮಾಡುತ್ತಾನೆ. ತಾನು ಕೊಂಡುತಂದ ಹಾವು ಗಿಳಿ ಯಾವ ಕೆಲಸಕ್ಕೆ ಬರುತ್ತವೆ ಎನ್ನುವುದು ಸಹ ಅವನಿಗೆ ಗೊತ್ತಿರುವುದಿಲ್ಲ. ಹಾವು ಕಚ್ಚುವ ಸಾಧ್ಯತೆಯಿದ್ದರೂ ಧೈರ್ಯದಿಂದ ಸಾಕಲು ತೊಡಗುತ್ತಾನೆ. ಅದಕ್ಕೆ ದಿನವೂ ಶಾಲೆಗೆ ಹೋಗುವುದಕ್ಕಿಂತ ಮುಂಚೆ ಹಾಲನ್ನು ಕುಡಿಸುವ ಕೆಲಸ ಮಾಡುತ್ತಿರುತ್ತಾನೆ. ಈ ಪ್ರಾಣಿ ಪಕ್ಷಿಗಳು ಕಿರಿಯ ವಯಸ್ಸಿನ ಈ ಕಥಾನಾಯಕನ ಕಲ್ಪನೆಯನ್ನು ಕೆರಳಿಸುತ್ತವೆ. ಅವನ ಕನಸುಗಳನ್ನು ಕಟ್ಟುತ್ತವೆ. ಈ ಕಥಾನಾಯಕನು ಅಮಾಯಕನು. ಉಪಾಯಗಾರನಲ್ಲ. ಆದರೆ ಅವನ ಸಂಗಾತಿಗಳಾಗುವ ಈ ಪ್ರಾಣಿ ಪಕ್ಷಿಗಳು ಮುಗ್ಧನಾದ ತಮ್ಮ ಒಡೆಯನಿಗೆ ಕಷ್ಟದಿಂದ ಪಾರಾಗುವ ಉಪಾಯಗಳನ್ನು ಹೇಳಿಕೊಡುತ್ತವೆ.

ಹಾವು ತನ್ನ ಕುಲದ ಒಡೆಯನಿಂದ ಹುಡುಗನಿಗೆ ಒಂದು ಬಂಗಾರದ ಉಂಗುರ ಕೊಡಿಸುತ್ತದೆ. ಈ ಉಂಗುರದ ನೆರವಿನಿಂದ ಹುಡುಗನ ಅದೃಷ್ಟವು ಖುಲಾಯಿಸುತ್ತದೆ. ಒಂದು ರಾಜ್ಯದಲ್ಲಿ ರಾಜಕುಮಾರಿಯೊಬ್ಬಳು ಬೆಳ್ಳಿಯ ಕೋಟೆ ಬಂಗಾರದ ಅಗಸಿಬಾಗಿಲು ಯಾರು ಕಟ್ಟಿಸಿಕೊಡುವರೇ ಅವರನ್ನು ಮಾತ್ರ ಮದುವೆ ಆಗುವ ಶರತ್ತು ಹಾಕಿರುತ್ತಾಳೆ. ಆಗ ಈ ಕಥೆಯ ನಾಯಕನು ಮಂತ್ರಶಕ್ತಿಯಿರುವ ತನ್ನ ಉಂಗುರದ ನೆರವಿನಿಂದ ಬೆಳ್ಳಿಕೋಟೆಯನ್ನು ಕಟ್ಟಿಸಿಕೊಟ್ಟು ಬಂಗಾರದ ಅಗಸಿಬಾಗಿಲನ್ನು ಮಾಡಿಸಿ ಅವಳನ್ನು ಲಗ್ನವಾಗುವನು.

ಆದರೆ ಕೆಲವು ಜನಪದ ಕಥೆಗಳಲ್ಲೂ ಆಗುವಂತೆ ಇಲ್ಲಿಯೂ ಸುಖವಾಗಿ ಬದುಕುವ ದಂಪತಿಗಳ ಬದುಕಿನಲ್ಲಿ ಒಂದು ನಾಟಕೀಯವಾದ ದುರ್ಘಟನೆ ನಡೆದುಹೋಗುತ್ತದೆ. ಒಬ್ಬ ಮುದುಕಿಯು ಸಾಹುಕಾರನೊಬ್ಬನ ಚಿತಾವಣೆಯಿಂದ ಮನೆಗೆ ಬಂದು ಆ ಉಂಗುರವನ್ನು ಹಾರಿಸಿಕೊಂಡು ಹೋಗುತ್ತಾಳೆ. ಕಥೆಯ ನಾಯಕ ಕಂಗಾಲಾಗುತ್ತಾನೆ. ಆದರೆ ಆಗ ಬೆಕ್ಕು ಮತ್ತು ಗಿಳಿಗಳು ಎರಡೂ ಸೇರಿ ಮುದುಕಿಯನ್ನು ಮೋಸಗೊಳಿಸುವ ಉಪಾಯವನ್ನು ಹೂಡುತ್ತವೆ. ಆ ಉಪಾಯವನ್ನು ಈ ಕಿರಿಯ ಹುಡುಗನಿಗೆ ಹೇಳಿಕೊಡುತ್ತವೆ. ಅದರಂತೆ ಮಾಡಿ ಅವನು ತನ್ನ ಉಂಗುರವನ್ನು ಮರಳಿ ಪಡೆಯುತ್ತಾನೆ.

ಈ ಕಥೆ ಸರಳವಾಗಿದೆ. ಇಲ್ಲಿ ಉಪಾಯಗಳು ಕಥೆಯ ನಾಯಕರಿಗೆ ಹೊಳೆಯದಿದ್ದರೆ, ಅದನ್ನು ಪ್ರಾಣಿಗಳು ಮತ್ತು ಗೆಳೆಯರು ಹೇಳಿಕೊಟ್ಟು ಅವರ ಗೆಲುವಿಗೆ ಕಾರಣರಾಗುತ್ತಾರೆ. ಆದ್ದರಿಂದ ಜನಪದ ಕಥೆಗಳಲ್ಲಿ ಎರಡು ವಿಧದ ಚಾಲಾಕಿ ನಾಯಕರು ಕಾಣಿಸುತ್ತಾರೆ. ಒಂದು ಸ್ವತಃ ತಮ್ಮ ಬುದ್ಧಿಮತ್ತೆಯನ್ನು ಓಡಿಸಿ ಕಾರ್ಯಸಾಧಿಸುವವರು. ಎರಡನೆಯದಾಗಿ ತಮ್ಮ ಸಂಗಾತಿಗಳ ನೆರವಿನಿಂದ ಉಪಾಯವನ್ನು ಕಡವಾಗಿ ತೆಗೆದುಕೊಂಡು ಅದರಂತೆ ಕಾರ್ಯ ಸಾಧನೆ ಮಾಡುವವರು.

ಕನ್ನಡ ಜನಪದ ಚಿಕ್ಕ ಮಕ್ಕಳ ಕಥೆಗಳೆ ಇಲ್ಲ ಎನ್ನಬಹುದು. ಚಿಕ್ಕಮಕ್ಕಳು ದೊಡ್ಡವರ ಬಾಳಿಗೆ ಸಂತೋಷ ತರುತ್ತಾರೆ. ಆದರೆ ಕೆಲವೊಮ್ಮ ತಲೆಬೇನೆಯನ್ನೂ ತರುತ್ತಾರೆ. ಪೀಠಿಕಾ ಭಾಗದಲ್ಲಿ ಹೇಳಿರುವ ಹಾಗೆಯೇ ಚಿಕ್ಕಮಕ್ಕಳು ಹಿರಿಯರ ಪ್ರೀತಿಗೆ ಪೋಷಣೆಗೆ ಒಳಗಾಗುವರು.

ಜತೆಗೆ ಇದೇ ಮಕ್ಕಳು ಹಿರಿಯರಿಂದ ತಮ್ಮ ಸ್ವಾತಂತ್ರವನ್ನು ಕಳೆದುಕೊಳ್ಳುವ ಕಷ್ಟಕ್ಕೂ ಒಳಗಾಗುವರು. ಅನುಭವ ತಿಳುವಳಿಕೆ ಇಲ್ಲದ ಮಕ್ಕಳು ಜೀವನದ ಬಗ್ಗೆ ಜೀವನದಲ್ಲಿ ನಿರ್ಣಯವನ್ನು ಕೈಗೊಳ್ಳಲಾರರು ಎಂಬುದು ಹಿರಿಯರ ಸಾಮಾನ್ಯ ಗ್ರಹಿಕೆ. ಹೀಗಾಗಿ ಹಿರಿಯರಾದವರು ಮಕ್ಕಳನ್ನು ಪ್ರೀತಿಸುತ್ತ ಮತ್ತು ಪೋಷಿಸುತ್ತಲೇ ಅವರ ಭಾವನೆಗಳನ್ನು ಹತ್ತಿಕ್ಕುತ್ತಾರೆ. ಅದರಲ್ಲೂ ಜೀವನ ಸಂಗಾತಿಯನ್ನು ಆಯ್ದುಕೊಳ್ಳುವ ವಿಷಯದಲ್ಲಿ ಕಿರಿಯರ ಭಾವನೆಗಳನ್ನು ಹಿರಿಯರು ಹೆಚ್ಚು ಹತ್ತಿಕ್ಕುತ್ತಾರೆ. ಹಿರಿಯರಿಂದ ತಮ್ಮ ಸ್ವಾತಂತ್ರ್ಯ ಚಲಾಯಿಸುವ ಅವಕಾಶಗಳನ್ನು ಕಳೆದುಕೊಳ್ಳುವ ಕಿರಿಯರು ಆ ಸ್ವಾತಂತ್ರ್ಯವನ್ನು ಮರಳಿ ಪಡೆಯುವ ಅನೇಕ ತಂತ್ರಗಳು ಮಾಡುತ್ತಾರೆ. ಹೆಚ್ಚು ಕ್ರಿಯಾಶೀಲವಾಗಿ ವರ್ತಿಸುತ್ತ ಉಪಾಯಗಳನ್ನು ಶೋಧಿಸುತ್ತಾರೆ. ಅವರ ದೈಹಿಕ ಅಶಕ್ತಿ ಮತ್ತು ಸಾಮಾಜಿಕ ನಿರ್ಬಂಧಗಳೇ ಹೊಸ ಹೊಸ ಉಪಾಯಗಳನ್ನು ಹುಡುಕಿಕೊಳ್ಳಲು ಒತ್ತಾಯಿಸುತ್ತವೆ. ಕನ್ನಡ ಜನಪದ ಕಥೆಗಳಲ್ಲಿ ಮಕ್ಕಳು ಉಪಾಯ ಹೂಡುವ ಮತ್ತು ಗೆಲ್ಲುವ ಆಶಯವುಳ್ಳ ಹಲವಾರು ಕಥೆಗಳು ಇರುವುದನ್ನು ನೋಡಬಹುದು. ಜಗತ್ತಿನ ತುಂಬಾ ಮಕ್ಕಳ ಉಪಾಯಗಾರಿಕೆ ಹೇಳುವ ಸಾವಿರಾರು ಕಥೆಗಳು ಚಾಲ್ತಿಯಲ್ಲಿವೆ.

---

ಅಧ್ಯಾಯ-೬

# ಅಂಗವಿಕಲರ ಉಪಾಯಗಾರಿಕೆಯ ಸ್ವರೂಪ

ಲೋಕದ ಜೀವರಾಶಿಗಳಲ್ಲಿ ಮಾನವರು ಉತ್ತಮ ಜೀವಿಗಳು ಎಂದು ಭಾವಿಸಲಾಗಿದೆ. ನಾಗರಿಕ ಜಗತ್ತು ತೀವ್ರಗತಿಯಲ್ಲಿ ಬದಲಾವಣೆ ಹೊಂದುತ್ತಿದೆ. ವಿಜ್ಞಾನ ಮತ್ತು ತಂತ್ರಜ್ಞಾನದಲ್ಲಿ ಹೊಸಹೊಸ ಸಂಶೋಧನೆಗಳು ನಡೆಯುತ್ತಿವೆ. ಸಮಾಜ ಆಧುನಿಕೀರಣಗೊಳ್ಳುತ್ತಿದೆ. ಇದರಲ್ಲಿ ಮಾನವರ ಬುದ್ಧಿಮತ್ತೆಯ ಪಾತ್ರವು ಹಿರಿದಾಗಿದೆ. ಆದರೆ ಇದೇ ಮಾನವ ಜಗತ್ತಿನಲ್ಲಿ ದೈಹಿಕ ವಿಕಲತೆಯುಳ್ಳವರು ಹೀನಾಯ ಬದುಕು ಸಾಗಿಸುವಂತಹ ಶೋಚನೀಯ ಪರಿಸ್ಥಿತಿಯೂ ಇದೆ. ಹುಟ್ಟಿನಿಂದಲೋ ಆಕಸ್ಮಿಕವಾದ ಅಪಘಾತದಿಂದಲೊ ದೈಹಿಕವಾಗಿ ಊನವನ್ನು ಪಡೆದುಕೊಳ್ಳುವ ಜನರು ನಮ್ಮ ಸಮಾಜದಲ್ಲಿ ಘನತೆಯ ಬಾಳನ್ನು ಬಾಳಲು ಪಡಬಾರದ ಪಾಡನ್ನು ಪಡುವರು. ಅಂಗವಿಕಲರು ಬದುಕುವ ರೀತಿ ಅವರು ಪಡುತ್ತಿರುವ ಕಷ್ಟ, ಅನುಭವಿಸುವ ಅಪಮಾನ ಮುಜುಗರ ನಮ್ಮ ಸಮಾಜವನ್ನು ಅಮಾನುಷವಾಗಿ ಮಾಡಿಬಿಟ್ಟಿವೆ.

ನಾಗರಿಕ ಸಮಾಜದಲ್ಲಿ ಅಂಗವಿಕಲತೆ ಇದ್ದವರನ್ನು ನೋಡುವ ಮಾನವೀಯ ದೃಷ್ಟಿಕೋನ ಇದ್ದೇ ಇರುತ್ತದೆ. ಸಮಾಜವು ಅಂಗವಿಕಲರಿಗೆ ವಿಶೇಷ ಸಹಾನುಭೂತಿಯನ್ನು ವ್ಯಕ್ತಪಡಿಸುತ್ತದೆ. ಇದರ ಪ್ರಕಾರ ಅವರು ತಮ್ಮ ಜೀವನ ನಿರ್ವಹಣೆಗಾಗಿ ಕೆಲವು ವಿಶೇಷ ಸೌಲಭ್ಯವನ್ನು ಪಡೆದುಕೊಳ್ಳುತ್ತಾರೆ. ಕುರುಡರಾಗಿದ್ದರೆ ಅವರನ್ನು ನಡೆಸಲು ನೆರವಾಗುತ್ತದೆ. ಕುಂಟರಾಗಿದ್ದರೆ ಅವರಿಗೆ ನಡೆಯಲು ಕುಳಿತುಕೊಳ್ಳಲು ಜನರು ನೆರವಾಗುತ್ತಾರೆ. ಕಿವುಡರಾಗಿದ್ದರೆ ಕೂಡ ಅದಕ್ಕೆ ತಕ್ಕಂತೆ ನೆರವಾಗುತ್ತಾರೆ. ಈಬಗೆಯ ಮಾನವೀಯತೆ ಮತ್ತು ಅಂತಃಕರಣವನ್ನು ಸಮಾಜವು ಮೊದಲಿಂದಲೂ ತೋರುತ್ತಾ ಬಂದಿದೆ. ಇದರಿಂದ ಅಂಗವಿಕಲರು ಎಲ್ಲರಂತೆ ಸುಲಭವಾಗಿ ಬದುಕಲು ಸಾಧ್ಯವಾಗುತ್ತದೆ.

ಆದರೆ ಹೀಗೆ ಕರುಣೆ, ಮಾನವೀಯತೆ, ಅಂತಃಕರಣಗಳುಳ್ಳ ಸಮಾಜದಲ್ಲಿಯೇ ಆಳದಲ್ಲಿ ಅಂಗವಿಕಲತೆಯನ್ನು ಒಂದು ಶಾಪವೆಂದು ಪರಿಗಣಿಸುವ ಮನೋಭಾವವಿದೆ. ಅಂಗವಿಕಲರನ್ನು

ನಿಂದನೆಯ ಪರಿಭಾಷೆಯನ್ನಾಗಿ ಮಾಡಿಕೊಳ್ಳಲಾಗಿದೆ. ಸಮಾಜವು ಅಂಗವಿಕಲರನ್ನು ಕೊಂಕು ನುಡಿಯನ್ನಾಡಿ ಘಾಸಿಗೊಳಿಸುತ್ತದೆ. ಅವರಲ್ಲಿರುವ ಶಕ್ತಿಯನ್ನು ನೋಡದೆ ಅವರಲ್ಲಿರುವ ಮಿತಿಯನ್ನೇ ನೋಡುವುದು ಮತ್ತು ಅದಕ್ಕೆ ಸಹಾನುಭೂತಿ ವ್ಯಕ್ತಪಡಿಸುತ್ತ ತಮ್ಮ ದೊಡ್ಡತನವನ್ನು ಪ್ರದರ್ಶಿಸುವುದು ಒಂದು ಬಗೆಯ ಹಿಂಸೆಯ ಕೃತ್ಯವೇ ಆಗಿದೆ. ಹೀಗಾಗಿ ಕುಂಟ ಕುರುಡ ಹ್ಯಾಗ ಮೂಗ, ಕಿವುಡ, ಚೊಂಚ, ತೊದಲ ಮೆಳ್ಳೆಗಣ್ಣ ಎನ್ನುವವು ನಮ್ಮ ಸಮಾಜದಲ್ಲಿ ಬೈಗುಳಗಳಾಗಿವೆ. ಕಳ್ಳನನ್ನು ನಂಬಿದರೂ ಕುಳ್ಳನನ್ನು ನಂಬಬಾರದು, ಕುಂಟನಿಗೆ ಎಂಟು ಚೇಷ್ಟೆ, ಕೂತ್ಕೊಂಡು ಕುರುಡ ಏನ್ಮಾಡ್ದ ಅಂದರೆ, ಕೆರಕೊಂಡು ಹುಣ್ಣುಮಾಡ್ಕೊಂಡ, ಉಂಡೇನೊ ಕೆಪ್ಪ ಅಂದರೆ ನಮ್ಮೂರ ಕಡೆ ಮಳೆ ಜಾಸ್ತಿ ಎಂದನಂತೆ, ಇತ್ಯಾದಿ ಗಾದೆಗಳು ಕೂಡ ಅಂಗವಿಕಲರ ಬಗ್ಗೆ ಸಮಾಜದಲ್ಲಿರುವ ನೇತ್ಯಾತ್ಮಕ ಧೋರಣೆಗೆ ಸಾಕ್ಷಿಯಾಗಿವೆ. ಈ ಬೈಗುಳವನ್ನು ಅವರು ಕೇವಲ ಅಂಗವಿಕರಿಗೆ ಮಾತ್ರ ಬಳಸುವುದಿಲ್ಲ.

ಸಮಾಜದ ನಿಂದನೆ ಮತ್ತು ಕುಹಕಗಳು ಅಂಗವಿಕಲರ ಮಾನಸಿಕ ಖಿನ್ನತೆಗೆ ಕಾರಣವಾಗುತ್ತವೆ. ಸಮಾಜದಿಂದ ಆಗುವ ಅಪಮಾನ ಮತ್ತು ಮುಜುಗರವನ್ನು ಸಹಿಸುವ ಅಪಾರ ಸಹನೆ ಸಾಮಾಜಿಕವಾಗಿಯೇ ಅಂಗವಿಕಲರಿಗೆ ಬಂದಿರುತ್ತದೆ. ಆದರೆ ಅಂಗವಿಕಲರು ನಿರ್ದಿಷ್ಟ ಅಂಗದಲ್ಲಿ ವಿಕಲರಾಗಿದ್ದರೂ ಇನ್ನೊಂದು ಅಂಗದಲ್ಲಿ ಅದರ ಕೊರತೆಯನ್ನು ತುಂಬಿಕೊಳ್ಳುವಂತೆ ಚುರುಕಾಗಿರುತ್ತಾರೆ. ನಿದರ್ಶನಕ್ಕೆ ಕುರುಡರಿಗೆ ಕಿವಿಯು ಹೆಚ್ಚು ಜಾಗೃತವಾಗಿರುತ್ತದೆ. ಸ್ಪರ್ಶಜ್ಞಾನವು ಬಹಳ ಸೂಕ್ಷ್ಮವಾಗಿರುತ್ತದೆ. ದೈಹಿಕವಾಗಿ ನ್ಯೂನತೆ ಇದ್ದವರಿಗೆ ಬುದ್ಧಿಶಕ್ತಿ ಮತ್ತು ಕುಶಲತೆಯ ಶಕ್ತಿ ಹೆಚ್ಚಿರುತ್ತದೆ. ಅವನ್ನು ಅಭಿವ್ಯಕ್ತಿಸುವ ಅವಕಾಶ ಮತ್ತು ಪರಿಸರವನ್ನು ನಾಗರಿಕ ಸಮಾಜವು ಒದಗಿಸಿಕೊಡಬೇಕಷ್ಟೆ. ಗದುಗಿನ ಪಂಚಾಕ್ಷರಿ ಗವಾಯಿ ಹಾಗೂ ಪುಟ್ಟರಾಜ ಗವಾಯಿಗಳ ನಿದರ್ಶನವು ನಮ್ಮ ಮುಂದಿದೆ. ಅವರು ಹುಟ್ಟಿನಿಂದ ಕುರುಡರಾಗಿದ್ದರೂ, ಜೀವನದಲ್ಲಿ ನಿರಾಶೆ ಹೊಂದದೆ, ತಮ್ಮ ಅದ್ಭುತ ಸ್ವರದಿಂದ ದೊಡ್ಡ ಗಾಯಕರಾಗಿ ಬೆಳೆದರು. ಇಂತಹ ನೂರಾರು ನಿದರ್ಶನಗಳು ನಮ್ಮಲ್ಲಿ ಇವೆ.

ಒಂದು ಸಮೀಕ್ಷೆಯ ಪ್ರಕಾರ, ಭಾರತೀಯ ಸಮಾಜದಲ್ಲಿ ಪ್ರತಿಶತ ೫ರಷ್ಟು ಜನ ಅಂಗವಿಕಲರಾಗಿದ್ದಾರೆ. ಅಂಗವಿಕಲತೆಗೆ ಜಾತಿ ವರ್ಗ ಧರ್ಮವಿಲ್ಲ. ಹಳ್ಳಿಪಟ್ಟಣಗಳ ಭೇದವಿಲ್ಲ. ಸ್ತ್ರೀಪುರುಷರಲ್ಲಿ ಬಡವ ಶ್ರೀಮಂತರಲ್ಲಿ ಸಮಾಜದ ಎಲ್ಲಾ ವರ್ಗ ಜಾತಿ ಧರ್ಮಗಳಲ್ಲಿ ಅಂಗವಿಕಲರಿದ್ದಾರೆ. ಆದರೆ ಗ್ರಾಮೀಣ ಪ್ರದೇಶದ ಬಡವರ್ಗಗಳಲ್ಲಿ ಅಂಗವಿಕಲರ ಸಂಖ್ಯೆ ಹೆಚ್ಚೆಂದು ತಿಳಿದುಬರುತ್ತದೆ.

ಜನಪದ ಕಥೆಗಳಲ್ಲಿ ಅಂಗವಿಕಲರು ಪಾತ್ರಗಳಾಗಿ ಬರುತ್ತಾರೆ. ಅವರ ಪಾತ್ರಚಿತ್ರಣವು ಎರಡು ರೀತಿಯಲ್ಲಿ ಕಾಣುತ್ತದೆ. ಮೊದಲನೆಯದಾಗಿ ಅವರನ್ನು ಒಟ್ಟು ಸಮಾಜವು ಹೇಗೆ

ನಡೆಸಿಕೊಳ್ಳುತ್ತದೆ ಎಂಬುದು. ಹೀಗೆ ನಡೆಸಿಕೊಳ್ಳುವಲ್ಲಿ ಅವರನ್ನು ಎರಡನೇ ದರ್ಜೆಯ ಪ್ರಜೆಯನ್ನಾಗಿ ನೋಡುವುದೂ ಇರಬಹುದು. ಸಹಾನುಭೂತಿಯಿಂದ ಕರುಣೆಯಿಂದ ನಡೆಸಿಕೊಳ್ಳುವುದೂ ಇರಬಹುದು. ಎರಡನೆಯದಾಗಿ ಸಮಾಜವನ್ನು ಅಂಗವಿಕಲರು ಯಾವ ರೀತಿಯಲ್ಲಿ ಮುಖಾಮುಖಿ ಮಾಡಿ ಜೀವನವನ್ನು ನಡೆಸುತ್ತಾರೆ ಎನ್ನುವುದು. ಇದರಲ್ಲಿ ಅವರು ಸಮಾಜ ಹೇರುವ ಕೀಳರಿಮೆಯನ್ನು ಒಪ್ಪಿಕೊಂಡು ನರಳುವುದೂ ಇರಬಹುದು. ಅದನ್ನು ಒಪ್ಪಿಕೊಳ್ಳದೆ ತಮ್ಮ ಅಂಗವಿಕಲತೆಯನ್ನೇ ಸವಾಲಾಗಿ ಸ್ವೀಕರಿಸಿ ಬದುಕನ್ನು ಕಟ್ಟಿಕೊಳ್ಳುವುದೂ ಇರಬಹುದು. ಅಂಗವಿಕಲರು ತಮ್ಮ ದೇಹದ ಕೊರತೆಗಳನ್ನು ಸವಾಲಾಗಿ ಸ್ವೀಕರಿಸಿ ಬದುಕನ್ನು ಎದುರಿಸುವಾಗಲೇ ಅವರ ಉಪಾಯಗಾರಿಕೆಯ ಸಾಧ್ಯತೆಗಳು ಹೊಮ್ಮುವುದು. ಈ ಸನ್ನಿವೇಶದಲ್ಲಿ ಅದೃಷ್ಟ ಅಥವಾ ದೈವವು ಅವರಿಗೆ ಸಹಾಯಕವಾಗಿ ಬಂದು ಒದಗುವ ಆಯಾಮವು ಜನಪದ ಕಥೆಗಳಲ್ಲಿ ಇದೆ. ಈ ಹಿನ್ನೆಲೆಯಲ್ಲಿ ಕೆಲವು ಜನಪದ ಕಥೆಗಳನ್ನು ಗಮನಿಸಬಹುದು.

ಒಂದು ಜನಪದ ಕಥೆಯಲ್ಲಿ ಇರುಳಗಣ್ಣಿನ ದೋಷವುಳ್ಳ ಅಳಿಯನೊಬ್ಬನು ಮದುವೆಯಾದ ಹೊಸತರಲ್ಲಿ ತನ್ನ ಅತ್ತೆ–ಮಾವರ ಮನೆಗೆ ಅಳಿಯೋಪಚಾರ ಸ್ವೀಕರಿಸಲು ಹೋಗುತ್ತಾನೆ. ಆದರೆ ಅವನಿಗೆ ರಾತ್ರಿಯೇ ಕುರುಡು ಆವರಿಸಿ ಬಹಳ ಕಷ್ಟವಾಗುತ್ತದೆ. ಇದು ಅವನ ಬದುಕಿಗೆ ದೊಡ್ಡ ಆಘಾತ. ಸಾಮಾಜಿಕ ಅಪಮಾನಕ್ಕೆ ಹೆದರಿ ಅವನು ತನ್ನ ರಾತ್ರಿಯ ಕುರುಡನ್ನು ಗೌಪ್ಯವಾಗಿಟ್ಟಿರುತ್ತಾನೆ. ಈ ವಿಷಯ ಹೊರಗಿನ ಜನರಿಗೆ ಗೊತ್ತಾಗುವುದಿಲ್ಲ. ಆದರೆ ಮದುವೆಯಾದ ಬಳಿಕ ಅವನ ನಿಜವಾದ ಕಷ್ಟಗಳು ಆರಂಭವಾಗುತ್ತವೆ. ತನ್ನ ಕುರುಡತನದಿಂದ ಆಗುವ ಫಜೀತಿಯಿಂದ ತಪ್ಪಿಸಿಕೊಳ್ಳಲು ಅಂಗವಿಕಲನಾದ ಅಳಿಯನು ಬಗೆಬಗೆಯ ಉಪಾಯಗಳನ್ನು ಮಾಡುತ್ತ ಹೋಗುತ್ತಾನೆ. ಇದನ್ನು ಈ ಕಥೆಯು ಬಹಳ ಸಂಭ್ರಮದಿಂದ ತಮಾಶೆಯಿಂದ ನಿರೂಪಿಸುತ್ತ ಹೋಗುತ್ತದೆ. ಇಲ್ಲಿ ಕಥೆಯು ಅವನ ಅಂಗವಿಕಲತೆಯನ್ನು ಪರಿಹಾಸ್ಯ ಮಾಡುವುದರಲ್ಲಿ ಮಾತ್ರ ನಿರತವಾಗುವುದಿಲ್ಲ. ಅಂಗವಿಕಲತೆಯನ್ನು ಅವನು ಗೆಲ್ಲುವ ಬಗೆಯನ್ನೂ ನಿರೂಪಿಸುವಲ್ಲಿ ನಿರತವಾಗುತ್ತದೆ.

ಒಂದು ದಿನ ಇರುಳುಗಣ್ಣ ಅಳಿಯನು ತನ್ನ ಅತ್ತೆಯ ಮನೆಗೆ ಸಂಜೆಯ ಇಳಿಹೊತ್ತಿನಲ್ಲಿ ಹೋಗುತ್ತಾನೆ. ರಾತ್ರಿಯಾಗುತ್ತದೆ. ಅವನ ತಂದೆ ತಾಯಿಗೆ ಇವನದೇ ಚಿಂತೆ. ರಾತ್ರಿಯಾಗುತ್ತದೆ. ಅಷ್ಟರಲ್ಲಿ ಮಾವನ ಮನೆಯವರು ಕೈಕಾಲು ತೊಳೆಯುವುದಕ್ಕೆ ನೀರು ಕೊಡುತ್ತಾರೆ. ಕೂರಲಿಕ್ಕೆ ಕಂಬಳಿ ಹಾಸಿ ಊಟಕ್ಕೆ ಕುಳಿತುಕೊಳ್ಳಲು ಹೇಳುತ್ತಾರೆ. ಏನೇನೊ ಕಷ್ಟಪಟ್ಟು ಅಳಿಯನು ಊಟ ಮುಗಿಸುತ್ತಾನೆ. ಆದರೆ ರಾತ್ರಿಯಲ್ಲಿ ಮೂತ್ರವಿಸರ್ಜನೆಗೆ ಹೋಗಲು ಯತ್ನಿಸಿ ಕಾಳು ಹಾಕುವ ತೆರೆದ ಕಣಜದಲ್ಲಿ ಬಿದ್ದು ಬಿಡುತ್ತಾನೆ. ಮೇಲೆಳುವುದಕ್ಕೆ ಪ್ರಯತ್ನ ಪಟ್ಟರೂ

ಆಗುವುದಿಲ್ಲ. ಕಣಜದ ಗೋಡೆಗಳು ತುಂಬಾ ಎತ್ತರವಾಗಿದ್ದರಿಂದ ಅವನಿಗೆ ಹತ್ತಲು ಸಾಧ್ಯವಾಗುವುದಿಲ್ಲ. ಅಳಿಯ ಯಾಕೊ ಬರಲಿಲ್ಲವೆಂದು ಬಂದು ಮಾನವ ಮನೆಯವರು ಬಂದು ನೋಡಿದರೆ ಈತ ಕಣಜದೊಳಗೆ ಇರುತ್ತಾನೆ. ಇದೇನು ಅಳಿಯಂದಿರೆ ಎಂದು ಕೇಳಿದರೆ, ಅವನು ಉಪಾಯದಿಂದ ಒಂದು ಸುಳ್ಳನ್ನು ಹೊಸೆಯುತ್ತಾನೆ. ಇಲ್ಲ ಮಾವಂದಿರೆ ನಾನು ಕೂಡ ಇಂತಹ ಧಾನ್ಯಹಾಕುವ ಕಣಜ ಕಟ್ಟಿಸಬೇಕೆಂದು ಇದ್ದೇನೆ. ಹೀಗಾಗಿ ಇದರ ಅಳತೆಯನ್ನು ನೋಡುತ್ತಿದ್ದೆ ಎಂದು ತಪ್ಪಿಸಿಕೊಳ್ಳುತ್ತಾನೆ. ದನಕರುಗಳ ಬಾಲ ಹಿಡಿದು ಮಾವನ ಮಾವನ ಮನೆಗೆ ಮುಜಗರದಿಂದಲೇ ಪ್ರವೇಶಿಸುತ್ತಾನೆ. ರಾತ್ರಿ ನಡೆಯಲು ಹೋಗಿ ಹಿತ್ತಲಲ್ಲಿರುವ ಪಾಯಖಾನೆ ಗುಂಡಿಯಲ್ಲಿ ಬೀಳುತ್ತಾನೆ. ಕಾರಣ ಕೇಳಿದರೆ, ನಾನು ಇಂತಹ ಪಾಯಿಖಾಣೆ ಕಟ್ಟಿಸಬೇಕೆಂದಿರುವೆ. ಆದ್ದರಿಂದ ಅದರ ಅಳತೆ ನೋಡಲು ಇಳಿದಿರುವೆ ಎಂದು ಪಾರಾಗುತ್ತಾನೆ. ಪ್ರತಿ ಸನ್ನಿವೇಶದಲ್ಲಿಯೂ ತನ್ನ ಇರುಳಗಣ್ಣಿನಿಂದ ಫಜೀತಿಗೆ ಒಳಗಾಗುವುದು, ಮತ್ತು ತನ್ನ ಬುದ್ಧಿವಂತಿಕೆಯ ಚಾಲಾಕಿ ಮಾತಿನಿಂದ ಅದರ ವಿಫಲತೆ ಗೊತ್ತಾಗದಂತೆ ಉಪಾಯದಿಂದ ತಪ್ಪಿಸಿಕೊಳ್ಳುವುದು ಹೀಗೆ ಕಥೆಯಲ್ಲಿ ನಡೆಯುತ್ತ ಹೋಗುತ್ತದೆ.

ಜೀವನದಲ್ಲಿ ಎಲ್ಲರಿಗೂ ಆಸೆ ಆಕಾಂಕ್ಷೆಗಳು ಇರುವಂತೆಯೇ ಅಂಗವಿಕಲರಿಗೂ ಇರುತ್ತವೆ. ಸಾವಿರ ಸುಳ್ಳು ಹೇಳಿ ಮದುವೆಯಾದಂತೆ ತನ್ನ ರಾತ್ರಿ ಕುರುಡುತನದ ಬಗ್ಗೆ ಅಡಗಿಸಿಟ್ಟು ಮದುವೆಯಾದ ವ್ಯಕ್ತಿಯು ಪಡಬಾರದ ಪಾಡುಗಳನ್ನು ಪಡುತ್ತಾ ಹೋಗುತ್ತಾನೆ. ಅವನು ತನ್ನ ಕುರುಡುತನ್ನು ಬಚ್ಚಿಡುವುದಕ್ಕೆ ಕಾರಣ ಸಮಾಜವು ಮಾಡಬಹುದಾದ ಅಪಮಾನ. ಹೀಗಾಗಿ ಕುರುಡುತನದಿಂದ ಉಂಟಾಗುವ ನೋವನ್ನು ತನ್ನಲ್ಲಿಯೇ ನುಂಗಿಕೊಂಡು ಹಸನ್ಮುಖಿಯಾಗಿರಲು ಯತ್ನಿಸುತ್ತಾನೆ. ಮುಂದೆ ಬರುವ ಎಲ್ಲಾ ಘಟನೆಗಳನ್ನು ಉಪಾಯದಿಂದ ತಪ್ಪಿಸಿಕೊಳ್ಳುವ ಯತ್ನ ಮಾಡುತ್ತಾನೆ. ಒಂದು ಕುಟುಂಬ ಅಥವಾ ಸಮಾಜದಲ್ಲಿ ಇರುವ ಎಲ್ಲಾ ತರಹದ ಸಾಮಾಜಿಕ ಸಮಸ್ಯೆಗಳ ನೋವು ನಲಿವುಗಳನ್ನು ತಮ್ಮ ಸುತ್ತ ಮುತ್ತಲಿನ ಪರಿಸರದೊಡನೆ ಆತ್ಮೀಯವಾಗಿ ಹಂಚಿಕೊಳ್ಳುವ ಒಂದು ಹೃದಯವಂತಿಕೆ ಸಮಾಜವು ಪ್ರಕಟಿಸುವುದನ್ನು ಜನಪದಕಥೆಗಳು ನಿರೂಪಿಸುತ್ತವೆ. ಇದರ ಭಾಗವಾಗಿಯೇ ಅವು ಅಂಗವಿಕಲತೆಯ ಕಾರಣದಿಂದ ಮಾನಸಿಕವಾಗಿ ಖಿನ್ನತೆ ಬಳಲುತ್ತಿದ್ದವರನ್ನು ಸಹಾನುಭೂತಿಯಲ್ಲಿ ಚಿತ್ರಿಸಲು ಯತ್ನಿಸುತ್ತವೆ. ಇದರ ಭಾಗವಾಗಿಯೇ ಅಂಗವಿಕಲರು ಅಪಮಾನದಿಂದ ತಪ್ಪಿಸಿಕೊಳ್ಳುವುದಕ್ಕೆ ಉಪಾಯ ಕಂಡುಹಿಡಿಯುವುದನ್ನು ಉತ್ಸಾಹದಿಂದ ಅವು ನಿರೂಪಿಸುತ್ತವೆ.

ಈ ಕಥೆಯಲ್ಲಿ ಬರುವ ಕಥಾನಾಯಕನು ತನ್ನ ಕುರುಡುತನದಿಂದ ಒಂದಾದ ನಂತರ ಒಂದು ಸಮಸ್ಯೆಯಲ್ಲಿ ಸಿಲುಕುತ್ತಲೇ ಹೋಗುತ್ತಾನೆ. ಅತ್ತೆಯು ಅಳಿಯನಿಗೆ ಊಟ ನೀಡಲು ಬಂದಾಗ ಪಕ್ಕದಲ್ಲಿ ಕಟ್ಟಿದ ಎಮ್ಮೆಕರು ಅಳಿಯನ ತಟ್ಟೆಯಲ್ಲಿ ಬಾಯಿ ಹಾಕುವುದಕ್ಕೆ ಬಂದಾಗ ಅದನ್ನು ಗದರಿಸಿದಳು. ಆದರೆ ಅತ್ತೆ ಸಾರು ನೀಡುವುದಕ್ಕೆ ಬಂದಾಗ ಅಳಿಯನು ಆಕೆಯ ಕೆನ್ನೆಗೆ ಎಮ್ಮೆಕರುವೆಂದು ಭಾವಿಸಿ ಹೊಡೆಯುತ್ತಾನೆ. ಆಗ ಅತ್ತೆಯು ಅದನ್ನು ಮನಸ್ಸಿಗೆ

ಹಚ್ಚಿಗೊಳ್ಳದಂತೆ ಸಮಾಧಾನ ನುಡಿಯುತ್ತಾಳೆ. ನಡುರಾತ್ರಿಯಲ್ಲಿ ಮೂತ್ರ ವಿಸರ್ಜನೆಗೆ ಎದ್ದಾಗ ಸಲೀಸಾಗಿ ಹೋಗಿಬರುಲು ತಾನು ಮಲಗಿದ್ದ ಸ್ಥಳದಿಂದ ಮೂತ್ರವಿಸರ್ಜನೆಯ ಸ್ಥಳದವರೆಗೆ ಒಂದು ವಸ್ತುವನ್ನು ಕಟ್ಟಿರುತ್ತಾನೆ. ದುರದೃಷ್ಟವಶಾತ್ ಕರು ಬಂದು ಅರ್ಧ ಭಾಗವನ್ನು ಬಾಯಿಂದ ಮೆದ್ದು ಅದನ್ನು ಹರಿದು ಬಿಡುತ್ತದೆ. ಹೀಗಾಗಿ ಅಂದಾಜಿನ ಮೇಲೆ ಬರುತ್ತಿರುವಾಗ ಮಧ್ಯದಲ್ಲಿ ಮಲಗಿದ ಅತ್ತೆಯ ಕಾಲಿಗೆ ಇವನ ಕಾಲು ತಾಗುತ್ತದೆ. ಅವಳು ಎಚ್ಚರಗೊಂಡು ಯಾರು ಅಂತ ಕೇಳುತ್ತಾಳೆ. ಉಪಾಯದಿಂದ ಅತ್ತೆ ನಾನು ನಿನಗೆ ಕಪಾಳಕ್ಕೆ ಹೊಡೆದಿರುವುದರಿಂದ ನನಗೆ ಸಮಾಧಾನವಿಲ್ಲವಾಗಿದೆ. ನಿದ್ದೆ ಬರುತ್ತಿಲ್ಲ. ಕ್ಷಮಿಸುತ್ತೀರೆಂದು ನಿಮ್ಮ ಪಾದವನ್ನು ಹಿಡಿಯಲು ಬಂದಿದ್ದೇನೆ ಎನ್ನುತ್ತಾನೆ. ಇಲ್ಲ ಅಳಿಯಂದಿರೆ ನಾನು ಏನೂ ತಪ್ಪು ತಿಳಿದುಕೊಂಡಿಲ್ಲ ಮಲಗಿ ಹೋಗಿ ಎಂದು ಅತ್ತೆ ನುಡಿಯುತ್ತಾಳೆ. ನೀವು ನನಗೆ ಕ್ಷಮಿಸಿರುವಿರಿ ಎನ್ನುವುದು ನಿಜವಾದರೆ ನನ್ನನ್ನು ಕೈಹಿಡಿದು ನನ್ನ ಕೋಣೆಗೆ ಬಿಡಿ ಎನ್ನುತ್ತಾನೆ. ಆಗ ಅತ್ತೆಯು ಅವನನ್ನು ಕೈಹಿಡಿದು ನಡೆಸಿಕೊಂಡು ಹೋಗಲು ತನ್ನ ಕೋಣೆ ಸೇರುತ್ತಾನೆ. ಅತ್ತೆ ಊಟ ನೀಡಲು ಬಂದಾಗ ಹೆಂಡತಿಯೆಂದು ಭಾವಿಸಿ ಆಕೆಯ ಕೈಯನ್ನು ಹಿಡಿಯುತ್ತಾನೆ. ತನಗೆ ಕಣ್ಣು ಕಾಣಿಸದೇ ಇರುವುದರಿಂದ ತನ್ನವಳು ಬಡಿಸುತ್ತಿರುವಳೆಂದು ಅವನ ಊಹೆಯಾಗಿರುತ್ತದೆ. ಆದರೆ ಹಿಡಿದ ಕೈ ಅತ್ತೆಯದು ಎಂದು ತಿಳಿದಾಗ ಇಕ್ಕಟ್ಟಿನಿಂದ ಪಾರಾಗಲು 'ನಿಮ್ಮ ಕೈಯ ಮೇಲೆ ನೊಣ ಕುಳಿತಿತ್ತು' ಎಂದು ಹೇಳಿ ಉಪಾಯದಿಂದ ಪಾರಾಗುತ್ತಾನೆ.

ತನ್ನ ಕಣ್ಣಿನ ನ್ಯೂನತೆಯಿಂದ ಸಂಭವಿಸುವ ಎಲ್ಲಾ ಸಮಸ್ಯೆಗಳಿಂದ ಅಳಿಯನು ಉಪಾಯದಿಂದ ಮತ್ತು ತನ್ನ ಸಮಯಸ್ಫೂರ್ತಿಯಿಂದ ಹುಟ್ಟುವ ತನ್ನ ಮಾತುಗಾರಿಕೆಯಿಂದ ಪಾರಾಗುತ್ತ ಹೋಗುತ್ತಾನೆ. ಜೀವನದಲ್ಲಿ ಎಡವಟ್ಟುಗಳು ಯಾವಾಗಲಾದರೂ ಸಂಭವಿಸುವುದರಿಂದ ಬುದ್ಧಿಯೂ ಸಹ ಅಷ್ಟೇ ಹರಿತವಾಗಿ ಓಡುತ್ತಿರುತ್ತದೆ. ಆದರೂ ಅವನಿಗೆ ತನ್ನ ಮಾವನ ಮನೆಯಲ್ಲಿ ಕಳೆಯುವುದಕ್ಕೆ ಒಂದು ದಿನದ ಬದುಕು ಕಳೆಯುವುದು ದುಸ್ತರವೆನಿಸುತ್ತದೆ. ಅವನು ತನ್ನ ಮಾವನ ಮನೆಯಲ್ಲಿ ರಾತ್ರಿಯನ್ನು ಕಳೆಯಲು ಹರಸಾಹಸ ಪಡುತ್ತಾನೆ. ಅವನಿಗೆ ಸ್ಥಳ ಅಪರಿಚಿತವಾಗಿರುತ್ತದೆ. ಮನೆಯಲ್ಲಿ ಎಲ್ಲಾ ಜಾಗಗಳನ್ನು ಹಗಲಲ್ಲಿ ನೋಡಿ ಗುರುತಿಟ್ಟುಕೊಳ್ಳುತ್ತಾನೆ. ರಾತ್ರಿಯಲ್ಲಿ ತನ್ನ ಸ್ಪರ್ಶಜ್ಞಾನ ಮತ್ತು ಬೌದ್ಧಿಕ ಉಪಾಯಗಳ ಸಹಾಯ ಪಡೆಯುವುದರ ಮೂಲಕ ಕತ್ತಲೆಯಂತಹ ಕಷ್ಟದ ಜೀವನವನ್ನು ಬೆಳದಿಂಗಳನ್ನಾಗಿ ಮಾಡಿಕೊಳ್ಳಲು ಹವಣಿಸುತ್ತಾನೆ.

ಈ ಕಥೆಗಳ ಮೂಲಕ ಜನಪದರು ಏನು ಹೇಳುತ್ತಿರಬಹುದು ಎಂಬ ಪ್ರಶ್ನೆಯು ಎದುರಾಗುತ್ತದೆ. ಮಾನವ ಬದುಕು ಸುಂದರವಾಗಿದೆ. ಈ ಬದುಕನ್ನು ಕಡೆಗಣಿಸುವುದು ತರವಲ್ಲ. ಜೀವನದಲ್ಲಿ ಸಮಪಾಲಾಗಿ ಸುಖ ದುಃಖಗಳೆರಡೂ ಇರುತ್ತವೆ. ದುಗುಡದ ಅನುಭವವನ್ನು ಹೋರಾಟದ ಮೂಲಕ ಇಲ್ಲವೇ ಜಾಣ್ಮೆಯ ಮೂಲಕ ಗೆಲ್ಲಬೇಕು. ನಮ್ಮ

ದೇಹದಲ್ಲಿ ನ್ಯೂನತೆಯಿದೆ ಎಂದು ಕುಳಿತುಕೊಳ್ಳದೆ ಆತ್ಮಬಲದಿಂದ ನಮ್ಮ ಕಾಯಕವನ್ನು ಮಾಡಬೇಕು ಎಂಬ ಸರಳವಾದ ಜೀವನತತ್ವವನ್ನು ಈ ಜನಪದ ಕಥೆಗಳು ಹೇಳುತ್ತಿವೆ ಅನಿಸುತ್ತದೆ.

ಸಮಾಜಕ್ಕೆ ಅಂಗವಿಕಲರು ತಮಾಶೆಯ ವಸ್ತುಗಳು. ಆದರೆ ಅವರ ಕುಟುಂಬದವರಿಗೆ ಅವರು ಒಂದು ಹೊರೆ. ಆದರೆ ಹೆತ್ತ ತಾಯಿಯ ದೃಷ್ಟಿಯಲ್ಲಿ ಅಂಗವಿಕಲ ಮಕ್ಕಳ ಮೇಲೆ ಹೆಚ್ಚು ಪ್ರೀತಿ. ತನ್ನ ಎಲ್ಲಾ ಮಕ್ಕಳು ಸರ್ವಾಂಗೀಣವಾಗಿ ಬೆಳೆಯಬೇಕೆಂಬ ಹಂಬಲ ಅವಳದ್ದಾದರೂ ಅಂಗವಿಕಲರ ಮೇಲೆ ವಿಶೇಷ ಕಾಳಜಿ. ತನ್ನ ಅಂಗವಿಕಲ ಮಕ್ಕಳಿಗೆ ಸಮಾಜದಿಂದ ಆಗುವ ಅಪಮಾನಗಳ ಬಗ್ಗೆ ಅವಳು ಅತೀವ ಕಾಳಜಿ ತೋರುತ್ತಾಳೆ. ತನ್ನ ಎಲ್ಲ ಮಕ್ಕಳೂ ಸರಿಸಮವಾಗಿ ಜೀವನವನ್ನು ಸ್ವಾವಲಂಬಿಗಳಾಗಿ ನಡೆಸುವುದನ್ನು ಕಾಣುವುದಕ್ಕೆ ಬಯಸುತ್ತಾಳೆ. ಅದರಲ್ಲೂ ಅಂಗವಿಕಲ ಮಕ್ಕಳು ಹೆಚ್ಚು ಸುಖದಿಂದ ಬದುಕುವುದಕ್ಕೆ ಅವಳು ಹಂಬಲಿಸುತ್ತಾಳೆ. ಅಂಗವಿಕಲರು ಪಾತ್ರಗಳಾಗಿರುವ ಜನಪದ ಕಥೆಗಳಲ್ಲಿ ಸಮಾಜವು ಅಂಗವಿಕಲರನ್ನು ನಡೆಸಿಕೊಳ್ಳುವ ಬಗ್ಗೆ ವಿವರಗಳಿರುವ ಹಾಗೆ, ಅವರನ್ನು ಪೋಷಿಸುವ ಪ್ರೀತಿಸುವ ತಾಯಿಯಂದಿರು ಕಡಿಮೆ ಕಾಣಿಸುವರು.

ಸಮಾಜವು ಅಂಗವಿಕಲತೆಯನ್ನು ಅಕಸ್ಮಿಕವಾಗಿ ಆದ ಜೈವಿಕ ಕೊರತೆ ಎಂದು ಭಾವಿಸುವುದಿಲ್ಲ. ಬದಲಿಗೆ ಅದು ಹಿಂದಿನ ಜನ್ಮದ ಕರ್ಮವೆಂದೂ, ಹಿರೀಕರು ಮಾಡಿದ ತಪ್ಪಿಗೆ ಮಕ್ಕಳು ಅಂಗವಿಕಲರಾಗಿ ಹುಟ್ಟುವರೆಂದೂ, ಅದು ದೇವರು ಕೊಟ್ಟ ಶಾಪವೆಂದೂ ಪರಿಗಣಿಸುತ್ತದೆ. ಅಂಗವಿಕಲತೆ ಕುರಿತ ಮೂಢನಂಬಿಕೆ ಸಮಾಜದಲ್ಲಿ ಬಲವಾಗಿ ನೆಲೆಸಿದೆ. ಚಿಕ್ಕವರಿಂದಾಗಿನ ತೊದಲುವಿಕೆ ಅಂದು ಎಲ್ಲರಿಗೂ ಇಷ್ಟವಾಗಿರುತ್ತದೆ. ದೊಡ್ಡವರಾದ ನಂತರ ತೊದಲು ಮಾತು ಕೀಳರಿಮೆಯಿಂದ ನೋಡುತ್ತಾರೆ. ಒಂದು ಜನಪದ ಕಥೆಯಲ್ಲಿ ಅಂಗವಿಕಲತೆಯು ತಮಾಶೆಗೆ ಈಡಾಗುವ ಪ್ರಸಂಗ ಹೀಗಿದೆ. ಅಲ್ಲಿ ಒಂದೇ ಕುಟುಂಬದಲ್ಲಿ ನಾಲ್ಕು ಅಕ್ಕ ತಂಗಿಯರನ್ನು ನೋಡಲು ವರನ ಕಡೆಯವರು ಬರುವ ಪ್ರಸಂಗವಿದೆ. ತಾಯಿ ಮಕ್ಕಳಿಗೆ ಅಲಂಕಾರವನ್ನು ಮಾಡುತ್ತಾಳೆ. ಅಪ್ಪನು ಮಕ್ಕಳಿಗೆ ನೀವು ಯಾರೂ ಮಾತನಾಡಕೂಡದು. ಉಪಹಾರ ಚಹಾ ನೀಡಿ ಸುಮ್ಮನೆ ಕುಳಿತುಕೊಳ್ಳಬೇಕು ಅಂದಿರುತ್ತಾನೆ. ಅಂದು ಉಳ್ಳಾಗಡ್ಡಿ ಭಜ್ಜಿಯನ್ನು ಮಾಡಲಾಗಿರುತ್ತದೆ. ನಾಲ್ಕು ಜನ ವರಗಳಲ್ಲಿ ಕೊನೆಯವನು ಬುದ್ಧಿವಂತನಾಗಿದ್ದು ಸುಮ್ಮನೆ ಕುಳಿತಿರುವ ಹುಡುಗಿಯರನ್ನು ಮಾತನಾಡಿಸಬೇಕೆಂದು 'ಭಜ್ಜಿ ತುಂಬಾ ಚೆನ್ನಾಗಿದೆ' ಎನ್ನುತ್ತಾನೆ. ನೋಡಲು ಸೌಂದರ್ಯವತಿಯಾಗಿದ್ದ ಚಿಕ್ಕವಳನ್ನು ಮಾತನಾಡಿಸಬೇಕೆಂಬ ಛಲದಿಂದ ಹೊಗಳುತ್ತಾನೆ. ಆಗ ಅವಳು ತೊದಲುತ್ತ 'ಯಪ್ಪಾ ಭಜ್ಜಿ ಅನಕಿ ನಾ ಮಾಡ್ಲಿನಿ' ಎನ್ನುವಳು. ಆಗ ಎರಡನೆಯದವಳು 'ಯಂಲ್ಲಿ ಯಂವಾ ಚುಳ್ಳ ಹೇಳತಿ, ನಾಂನು ಮಾಡ್ಲಿನಿ' ಎನ್ನುವಳು.

ತದನಂತರ ಮೂರನೆಯವಳು 'ಯಂಪ್ಪಾ ನಮಗ ಮಾಟಾಡ ಬ್ಯಾಡಾ ಅಂತ ಹೇಳ್ಯಾನ. ಮಂತ್ತ ನೀವು ಯಾಂಕ ಮಾತ್ಲತ್ತಿರೀ' ಎನ್ನುವಳು. ಆಗ ಹಿರಿಯವಳು ಹೇಳುತ್ತಾಳೆ: 'ನಿಂವು ಮಾಂತು ಆಡ್ಲಿರೀ ನಾಂನು ಮಾತ್ಲಾಡತಿನಿ.' ಆಗ ಅವರನ್ನು ನೋಡಲು ಬಂದ ವರಗಳು ಇವರು ತೊದಲು ಮಾತುಗಳಿಗೆ ಬೆಚ್ಚಿ ಬಿದ್ದು ನಗುತ್ತಾರೆ. ಅವರಿಗೆ ಅದು ಅಪಹಾಸ್ಯವಾಗಿ ಕಾಣುತ್ತದೆ.

ಈ ಕಥೆಯಲ್ಲಿ ಹುಡುಗಿಯರು ನೋಡಲು ರೂಪವತಿಯಾದರೂ ತೊದಲುವ ನ್ಯೂನತೆಯಿಂದ ಬಳಲುತ್ತಿರುತ್ತಾರೆ. ತಂದೆತಾಯಿ ಸುಳ್ಳು ಹೇಳಿ ಉಪಾಯದಿಂದ ಅವರನ್ನು ಮದುವೆ ಮಾಡಲು ಪ್ರಯತ್ನಿಸುತ್ತಿರುತ್ತಾರೆ. ಆದರೆ ಇವರ ಯತ್ನಗಳು ಬುದ್ಧಿವಂತ ಉಪಾಯಗಾರನೆದುರು ಸೋಲುತ್ತವೆ. ಇದೊಂದು ಈ ಅಧ್ಯಯನದ ವಿಷಯದ ದೃಷ್ಟಿಯಿಂದ ಪೂರಕವಲ್ಲದ ಕಥೆ. ಯಾಕೆಂದರೆ ಇಲ್ಲಿ ಅಂಗವಿಕಲರು ಮಾಡುವ ಉಪಾಯಗಾರಿಕೆ ಗೆಲ್ಲುವುದಿಲ್ಲ. ಸೋಲುತ್ತದೆ. ಅವರು ಅಪಮಾನಕ್ಕೆ ಈಡಾಗುತ್ತಾರೆ. ಈ ಕಥೆಯು ಅಂಗವಿಕಲರ ವಿಕಲತೆಯನ್ನು ಗೇಲಿ ಮಾಡುತ್ತಿದೆ. ಅಂದರೆ ಜನಪದರು ತಮ್ಮ ಎಲ್ಲ ಕಥೆಗಳಲ್ಲಿಯೂ ಅಂಗವಿಕಲತೆಯ ಪರವಾಗಿ ಇರುವುದಿಲ್ಲ. ಬದಲಿಗೆ ಅವರು ಅದರ ವಿರುದ್ಧವಾಗಿ ಸಾಂಪ್ರದಾಯಿಕವಾಗಿ ಕೂಡ ಆಲೋಚಿಸುವರು.

ಇನ್ನೊಂದು ಜನಪದ ಕಥೆಯಲ್ಲಿ ದಂಪತಿಗಳಿರುತ್ತಾರೆ. ಹೆಂಡತಿಯಾದವಳು ಗಂಡನಿಗೆ ಮುಕಡ್ಯಾ ಮುಕಡ್ಯಾ ಅಂತ ಅವನ ಅಂಗವಿಕಲತೆಯನ್ನು ಅಣಕಿಸುತ್ತಿರುತ್ತಾಳೆ. ಇದನ್ನು ಅವನಿಗೆ ಕೇಳಿ ಕೇಳಿ ತುಂಬಾ ಬೇಸರವೆನಿಸುತ್ತದೆ. ಅವನು ಆಕ್ಷೇಪ ಮಾಡಿದಾಗ, 'ನಾನು ಚೇಷ್ಟೆ ಮಾಡುತ್ತಿರುವಾಗ ನಾವಿಬ್ಬರೆ ಇರುವುದಲ್ಲವೆ?' ಎಂದು ಆಕೆ ಸಮಾಧಾನ ಮಾಡತ್ತಾಳೆ. ಆದರೆ ದಿನಗಳು ಸವೆದಂತೆ ಮನೆಗೆ ಗಂಡನ ಒಬ್ಬ ಗೆಳೆಯ ಆಗಮಿಸುತ್ತಾನೆ. ರಾತ್ರಿ ಅಲ್ಲಿಯೇ ತಂಗುತ್ತಾನೆ. ಆಗ ಗಂಡನು 'ನನ್ನ ಗೆಳೆಯನ ಎದುರಿಗೆ ಮುಕಡ್ಯಾ ಅನ್ನಬೇಡ' ಎಂದು ಎಚ್ಚರಿಸುತ್ತಾನೆ. ಆದರೆ ರೂಢಿಯಿಂದ ಆಕೆಯ ಮೇಲೆ ನಾಲಿಗೆಯ ಮೇಲೆ ಆ ಪದವು ಸಹಜವಾಗಿ ಬಂದು ನುಲಿಯುತ್ತದೆ. ಅವಳು ಗಂಡನಿಗೆ ಅವಮಾನವಾಗುವಂತೆಯೇ ಗೆಳೆಯನಿಗೆ ಕಾಲು ತೊಳೆಯಲು ನೀರು ಕೊಡುವಾಗ 'ಮುಕಡ್ಯಾ ಒಂದು ತಂಬಿಗೆ ನೀರು' ಎಂದು ಕೇಳುತ್ತಾಳೆ. ಇದನ್ನು ಕೇಳಿಸಿಕೊಂಡ ಗೆಳೆಯನಿಗೆ ಮೊದಲು ಅಷ್ಟಾಗಿ ಅರ್ಥವಾಗಲಿಲ್ಲ. ಬೆಳಿಗ್ಗೆ ಚಹಾ ಕೊಡುವಾಗ ಹೆಂಡತಿ 'ಚಹಾ ತಗೋಳ್ ಮುಕಡ್ಯಾ' ಅನ್ನುತ್ತಾಳೆ. ಆಗ ಗೆಳೆಯನು ಗಂಡನಾದವನಿಗೆ 'ಈ ರೀತಿ ಅಪಮಾನವಾಗುವಂತಹ ಚೇಷ್ಟೆ ಮಾಡುತ್ತಿದ್ದರೂ ಸುಮ್ಮನೆ ಇರುವೆಯಲ್ಲ' ಎಂದು ಹಂಗಿಸುತ್ತಾನೆ. ಈ ಘಟನೆಯಿಂದ ಗಂಡನು ಮನಸ್ಸಿನಲ್ಲಿ ನೊಂದುಕೊಂಡು ಮನೆಗೆ ಮರಳುತ್ತಾನೆ. ಬಂದವನು ಹೆಂಡತಿ 'ಮುಕಡ್ಯಾ' ಎಂದಾಗ ಕೋಪದಿಂದ 'ನಿನಗೆ ಎಷ್ಟುಬಾರಿ ಹೇಳಿದರೂ ಕೇಳುವುದಿಲ್ಲ. ನಿನಗೆ ಗತಿ ಕಾಣಿಸುವೆ ಎಂದು ಎರಡು ಏಟು ಹೊಡೆಯುತ್ತಾನೆ. ಆಕೆ ನೆಲಕ್ಕೆ ಉರುಳಿ ಸಾವನ್ನಪುತ್ತಾಳೆ.

ಈ ಕಥೆಯು ಸಹ ಅಂಗವಿಕಲರ ನೋವನ್ನು ಹೇಳುತ್ತದೆ. ಆದರೆ ಅವರ ಉಪಾಯಗಾರಿಕೆಯನ್ನಲ್ಲ. ಸುತ್ತಮುತ್ತಲಿನ ಸಮಾಜವು ವ್ಯಕ್ತಿಯ ಅಂಗವಿಕಲತೆಯನ್ನು ಸೂಚಿಸಿ ನೋವನ್ನು ಹೆಚ್ಚಿಸಿದಾಗ ಅವರ ಬದುಕು ಅಸಹನೀಯವಾಗುತ್ತದೆ. ಅವಹೇಳನದ ಮಾತುಗಳನ್ನು ಕೇಳಿಕೇಳಿ 'ಯಾವ ಕರ್ಮದ ಶಿಕ್ಷೆಯಿದು' ಎಂದು ಮನಸ್ಸು ಜರ್ಜರಿತವಾಗುತ್ತದೆ. ಈ ಕಥೆಯು ಅಂಗವಿಕಲನಾದ ಗಂಡನಿಗೆ ಅಪಮಾನವೆನ್ನುವುದು ನಿರಂತರವಾಗಿ ನಡೆಯುತ್ತದೆ ಎಂದು ಸೂಚಿಸುತ್ತದೆ. ಅವನು ತನ್ನ ಹೆಂಡತಿಯ ಅಂತ್ಯ ಸಂಸ್ಕಾರ ಮಾಡುತ್ತಾನೆ. ಕೆಲವು ದಿನಗಳಲ್ಲಿ ಅವಳ ಸಮಾಧಿಯ ಮೇಲೆ ಗೋಳಿಪಲ್ಯ ಬೆಳೆದಿರುತ್ತದೆ. ಅದನ್ನು ಕಿತ್ತುತಂದು ಸಾರಿಗೆ ಕುದಿಯಲು ಇಡುತ್ತಾನೆ. ಆಗ ಆ ಪಲ್ಲೆಯು ಗುದುಗುದು ಮುಕಡ್ಯಾ ಗುದ್ಯಾಕ ಮುಕಡ್ಯಾ ಎನ್ನುವಂತೆ ಶಬ್ದ ಮಾಡುತ್ತದೆ. ಅದನ್ನು ಎಮ್ಮೆಗೆ ಹಾಕುತ್ತಾನೆ. ಅದನ್ನು ತಿಂದ ಎಮ್ಮೆ ಕೂಡ ವಂಯಕ್ ವಂಯಕ್ ಮುಕಡ್ಯಾ ವಂಯಕ್ ವಂಯಕ್ ಮುಕಡ್ಯಾ ಎಂದು ಸದ್ದು ಹೊರಡಿಸಿ ಅಪಮಾನ ಮಾಡುತ್ತದೆ. ಮಾನವ ಸಮಾಜದ ಜತೆ ಪ್ರಾಣಿಲೋಕವೂ ತನ್ನನ್ನು ಹಂಗಿಸುತ್ತಿರುವುದರಿಂದ ಅಂಗವಿಕಲನು ತೊಂದರೆಗೆ ಈಡಾಗುತ್ತಾನೆ. ಇದರಿಂದ ತಪ್ಪಿಸಿಕೊಳ್ಳಲು ಹರಸಾಹಸ ಮಾಡುತ್ತಾನೆ. ಹೆಂಡತಿಯನ್ನು ಕೊಲೆಗೈದರೂ ಅವನ ಸಮಸ್ಯೆ ಪರಿಹಾರವಾಗುವುದಿಲ್ಲ. ಎಮ್ಮೆ ಸತ್ತಬಳಿಕ ಅದರ ಚರ್ಮದಿಂದ ಚಪ್ಪಲಿ ತಯಾರಿಸಲಾಗುತ್ತದೆ. ಆದರೆ ಅದನ್ನು ಮೆಟ್ಟಿದರೆ ಅದು 'ಚರಕ್ ಚರಕ್ ಮುಕಡ್ಯಾ ಚರಕ್ ಮುಕಡ್ಯಾ' ಎಂದು ಸದ್ದು ಹೊರಡಿಸುತ್ತದೆ. ಪ್ರತಿ ಘಟನೆಯಲ್ಲೂ ಕಥಾನಾಯಕ ಮುಜುಗರದಿಂದ ತಪ್ಪಿಸಿಕೊಳ್ಳುವ ಉಪಾಯ ಮಾಡುತ್ತಾನೆ. ಆದರೆ ಯಶಸ್ಸು ಪಡೆಯುವುದಿಲ್ಲ. ಭೂಮಿಯ ಮೇಲಿರುವ ಸಕಲ ಜೀವರಾಶಿಗಳು ಅವನ ದೈಹಿಕ ನ್ಯೂನತೆಯ ಬಗ್ಗೆ ಹಂಗಿಸುವಂತೆ ಭಾಸವಾಗುತ್ತವೆ. ಅವನು ಕೋಪದಿಂದ ಪಾದರಕ್ಷೆಗಳನ್ನು ಬಗೆಯುತ್ತಾನೆ. ಅದರ ಚರ್ಮವನ್ನು ತಿಂದ ನಾಯಿಯೂ ಕೂಡ ಬೊಗಳುವಾಗ 'ವೊವ್ ವೊವ್ ಮುಕಡ್ಯಾ ವಯಂಕ್ ಮುಕಡ್ಯಾ' ಎಂಬ ಶಬ್ದವನ್ನು ಹೊರಡಿಸುತ್ತದೆ.

ಈಗ ಕಥಾನಾಯಕನಿಗೆ ನೆಮ್ಮದಿ ಹೊರಟುಹೋಗುತ್ತದೆ. ಅವನ ಬದುಕುವ ಬಲವು ಕುಸಿಯುತ್ತದೆ. ಅವನು ಕಡೆಗೆ ಸಂಸಾರವನ್ನೇ ತ್ಯಜಿಸಿ ಸಂನ್ಯಾಸಿಯಾಗಿ ಮಾರ್ಪಟ್ಟು ಬೂದಿಯನ್ನು ಲೇಪಿಸಿಕೊಳ್ಳುತ್ತಾನೆ. ಆ ಬೂದಿಯು ಸಹ 'ಬೂದಿ ಬೂದಿ ಮುಕಡ್ಯಾ ಬುದ್ಯಾಕ್ ಮುಕಡ್ಯಾ' ಎಂದು ಅಣಕಿಸುತ್ತದೆ. ತನ್ನೆಲ್ಲಾ ಉಪಾಯಗಳು ವಿಫಲವಾದಾಗ ನೋವನ್ನು ತಡೆಯಲಾರದೆ ಕಥಾನಾಯಕನು ಕಡೆಗೆ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಹೀಗೆ ನಾಯಕನ ಕೀಳರಿಮೆಗೆ ಕಾರಣವಾದ ಅಂಗವಿಕಲತೆಯು ಅಂತಿಮವಾಗಿ ಅವನ ಜೀವವನ್ನು ಬಲಿಬೇಡಿ ಪಡೆಯುತ್ತದೆ. ಕಥೆಯು ದುರಂತದ ಮೂಲಕ ಕೊನೆಗೊಳ್ಳುತ್ತದೆ.

ಅಂಗವಿಕಲತೆಯು ಒಂದು  ಶಾಪವಲ್ಲ. ಅದು ಕೇವಲ ದೈಹಿಕ ಕೊರತೆ ಮಾತ್ರ. ಅದನ್ನು ಆತ್ಮವಿಶ್ವಾಸದಿಂದ ಎದುರಿಸಿ ಬದುಕುವುದು ಸಾಧ್ಯ. ಆದರೆ ಹೀಗೆ ಬದುಕಲು ಅಂಗವಿಕಲರಾದವರಿಗೆ ಸಮಾಜದ ಪರಿಸರದ ನೆರವು ಬೇಕು. ಅಂತಹ ನೆರವನ್ನು ಸಾಮಾಜಿಕ ಕಳಕಳಿಯ ಅಂತಃಕರುಣೆಯೆಂದು ಕರೆಯಬಹುದು. ಆದರೆ ಈ ಬಗೆಯ ಅಂತಃಕರಣೆ ಸರ್ವರಲ್ಲಿಯೂ ಇರಲು ಸಾಧ್ಯವಿಲ್ಲ. ಅಂಗವಿಕಲರು ಆತ್ಮವಿಶ್ವಾಸ ಕಳೆದುಕೊಳ್ಳಲು ಸಾಧ್ಯವಾಗದಂತೆ ಅಂತಹ ವ್ಯಕ್ತಿಗಳಲ್ಲಿ ಚೈತನ್ಯ ತುಂಬುವ ಕೆಲಸ ನಡೆಯಬೇಕು. ಆದರೆ ಈ ಕಥೆಯಲ್ಲಿ ಅದು ಸಂಭವಿಸುವುದಿಲ್ಲ. ಅಂಗವಿಕಲತೆ ಅವನನ್ನು ಅಪಮಾನವಾಗಿ ಬೇಟೆಯಾಡುತ್ತದೆ. ಕಡೆಗೆ ಅವನು ಸೋತು ಪ್ರಾಣ ಕಳೆದುಕೊಳ್ಳುತ್ತಾನೆ. ವಿಚಿತ್ರವೆಂದರೆ, ಅವನ ಸಾವಿಗೆ ಕಥೆಯಲ್ಲಿ ಯಾವುದೇ ಮರುಕವಿಲ್ಲ. ಬದಲಾಗಿ ಅದನ್ನು ಕಥೆಯು ಒಂದು ವಿನೋದವೆಂದೇ ತಿಳಿದಂತಿದೆ.

ಇನ್ನೊಂದು ಜನಪದ ಕಥೆಯಲ್ಲಿ ಒಬ್ಬ ಕುಂಟ ಒಬ್ಬ ಕುರುಡ ಇರುತ್ತಾರೆ. ಕುರುಡನಿಗೆ ಸಮಾಜದಲ್ಲಿನ ಜನರ ಮುಖಗಳನ್ನು ಗುರುತಿಸುವುದಕ್ಕೆ ಸಾಧ್ಯವಾಗುವುದಿಲ್ಲ. ಆದರೆ ತನ್ನ ಸ್ಪರ್ಶಜ್ಞಾನದ ನೆರವಿನಿಂದ ಆಯಾ ವ್ಯಕ್ತಿಯ ಧ್ವನಿಯ ಮೂಲಕ ಜನರನ್ನು ಗುರುತಿಸುತ್ತಾನೆ. ಹೀಗೆಯೇ ಇಬ್ಬರೂ ಕೆಲಸವಿಲ್ಲದೆ ಗುಡಿಯ ಕಟ್ಟೆಗೆ ಕುಳಿತು ಬೀಡಿ ಸೇದುತ್ತ ವಾಸವಾಗಿರುತ್ತಾರೆ. ಕಣ್ಣು ಕಾಣದಿದ್ದರೂ ಜಾಣನಾಗಿದ್ದ ಕುರುಡನು ಕುಂಟನ ಸಹಾಯ ತೆಗೆದುಕೊಳ್ಳುತ್ತಿರುತ್ತಾನೆ. ಅವರೆಂದೂ ತಮ್ಮ ಜೀವನದಲ್ಲಿ ಕುಗ್ಗಿ ಹೋಗುವುದಿಲ್ಲ. ಒಂದು ದಿನ ಕುಂಟನು ಹೋಗಿ ಒಂದು ಕತ್ತೆ ತರುತ್ತಾನೆ. ಇಬ್ಬರೂ ಅದನ್ನು ಹಿಡಿದುಕೊಂಡು ಒಬ್ಬರಿಗೊಬ್ಬರಿಗೆ ಸಹಾಯಕರಾಗಿ ಸಾಗುತ್ತ ಒಂದು ಊರಿಗೆ ನಡೆಯುತ್ತಾರೆ. ಕುರುಡನಿಗೆ ಕಣ್ಣು ಕಾಣದಿದ್ದರೂ ಕೆಲವು ವಸ್ತುಗಳ ಸೂಕ್ಷ್ಮ ಗ್ರಹಿಕೆ ಹಾಗೂ ನೆನೆಪಿನ ಶಕ್ತಿ ಚೆನ್ನಾಗಿರುತ್ತದೆ. ಒಂದು ಸಲ ತಿಪ್ಪೆಯಲ್ಲಿ ಬಿದ್ದಿದ್ದ ಮೊರವನ್ನು ತೆಗೆದುಕೊಳ್ಳುತ್ತಾರೆ. ದಾರಿಯಲ್ಲಿ ಸಿಗುವ ಒನಕೆಯನ್ನು ಅವರು ಎತ್ತಿಕೊಳ್ಳುತ್ತಾರೆ. ದಾರಿಯಲ್ಲಿ ಒಂದು ಹೊಲದಲ್ಲಿ ಇಬ್ಬರೂ ಕುಳಿತು ಬೀಡಿ ಸೇದುತ್ತಾರೆ. ನನಗೆ ಮುಂಜುಣ ಬೇಕು ಎಂದು ಕುಂಟ ಕೇಳುತ್ತಾನೆ. ಆಗ ರೈತನು ಎರಡು ಸುತ್ತು ಮಡಿಕೆ ಹೊಡೆದರೆ ಕೊಡುತ್ತೇನೆ ಎಂದು  ಹೇಳುತ್ತಾನೆ. ಆಗ ಕುಂಟನು ತನ್ನ ಚಟವನ್ನು ತೀರಿಸಲು ಕಷ್ಟಪಟ್ಟು ಎರಡು ಸುತ್ತು ಮಡಿಕೆ ಹೊಡೆದು ಮುಂಜಣ ತೆಗೆದುಕೊಂಡು ಕತ್ತೆಯ ಮೇಲೆ ಹೇರಿಕೊಂಡು ಹೊರಡುತ್ತಾರೆ.

ಈ ಕಥೆಯಲ್ಲಿ ಕುರುಡ ಕುಂಟ ಇಬ್ಬರೂ ಅಂಗವಿಕಲರಾಗಿದ್ದರೂ ಬುದ್ಧಿವಂತಿಕೆ ಹೊಂದಿದ್ದವರು. ತುಂಬ ಚೇಷ್ಟೆ ಮಾಡುತ್ತಿದ್ದವರು. ಧೈರ್ಯವಂತರು. ಒಮ್ಮೆ ಅವರು ಒಂದು ಪಾಳುಗುಡಿಗೆ ಹೋಗಿ ಆಶ್ರಯ ಪಡೆಯುತ್ತಾರೆ. ಆದರೆ ಆ ಗುಡಿಯಲ್ಲಿ ಒಂದು ರಾಕ್ಷಸಿ ವಾಸವಾಗಿರುತ್ತದೆ. ಅದು ಹೊರಗೆ ಹೋಗಿದ್ದಾಗ, ರಾಕ್ಷಸಿ ಸಾಕಿಕೊಂಡಿದ್ದ ಮಹಿಳೆಗೆ

ಗುಡಿಯಲ್ಲಿ ತಮಗೂ ಸ್ವಲ್ಪ ಸ್ಥಳಾವಕಾಶ ಮಾಡಿಕೊಡಬೇಕು ಎಂದು ಇಬ್ಬರೂ ಮನವಿ ಮಾಡುತ್ತಾರೆ. ಆಕೆ ಒಪ್ಪಿ ರಾಕ್ಷಸಿ ಬಂದಾಗ ಅಟ್ಟದ ಮೇಲೆ ಏರಿಕೂರಲು ಸೂಚಿಸುತ್ತಾಳೆ. ಇವರು ತಾವು ತಂದಿದ್ದ ವಸ್ತುಗಳ ಜತೆ ಕತ್ತೆಯನ್ನು ಕರೆದುಕೊಂಡು ಅಟ್ಟ ಏರಿ ಕುಳಿತುಕೊಳ್ಳುವರು.

ಸ್ವಲ್ಪ ಹೊತ್ತಿನಲ್ಲಿಯೇ ರಾಕ್ಷಸಿ ಬರುತ್ತದೆ. ಅದಕ್ಕೆ ಮನುಷ್ಯರ ವಾಸನೆಯನ್ನು ಗ್ರಹಿಸುವ ಶಕ್ತಿ ಇರುತ್ತದೆ. ಅದು ತಾನು ಸಾಕಿಕೊಂಡ ಮಹಿಳೆಗೆ ಯಾರೊ ನರಮನುಷ್ಯರ ವಾಸನೆ ಬರುತ್ತಿದೆ ಎಂದು ಸಂಶಯಪಟ್ಟು ಕೇಳುತ್ತದೆ. ಆಗ ಆ ಹೆಂಗಸು ಏನೊ ಒಂದು ಸುಳ್ಳುಹೇಳಿ ಇವರನ್ನು ಪಾರುಮಾಡುತ್ತದೆ. ಮುಂದೆ ರಾಕ್ಷಸಿಯು ಹೊಟ್ಟೆ ತುಂಬಾ ತಿಂದು ಮಲಗುತ್ತದೆ.

ಮುಂದೆ ಕಥೆಯಲ್ಲಿ ಕುರುಡನಿಗೆ ಮೂತ್ರಕ್ಕೆ ಬರುತ್ತದೆ. ಅವನು ವಿಸರ್ಜನೆ ಮಾಡುತ್ತೇನೆ ಎಂದು ಹೇಳಿದಾಗ ಬೇಡ ರಾಕ್ಷಸಿ ಮಲಗಿದೆ ಎಂದು ಕುಂಟ ಅವನನ್ನು ಸುಮ್ಮನಿರಿಸುತ್ತಾನೆ. ಆದರು ಕುಂಟನ ಬುದ್ಧಿಮಾತು ಕೇಳದೆ ಕುರುಡನು ಮೂತ್ರ ವಿಸರ್ಜನೆ ಮಾಡುತ್ತಾನೆ. ಅದು ಮಲಗಿದ ರಾಕ್ಷಸಿಯ ತೆರೆದ ಬಾಯಲ್ಲಿ ಬೀಳುತ್ತದೆ. ಮುಂದೆ ಕುಂಟನು ನನಗೆ ಹಾಡುವ ಇಚ್ಚೆಯಾಗಿದೆ ಹಾಡುತ್ತೇನೆ ಎಂದು ಕಂಠ ತೆಗೆದು ಹಾಡಲು ಆರಂಭಿಸುತ್ತಾನೆ. ಆಗ ಮಲಗಿದ್ದ ರಾಕ್ಷಸಿಯು ಎಚ್ಚರಗೊಂಡು ಇಲ್ಲಿ ಮನುಷ್ಯರು ಇದ್ದಾರೆ, ಅವರನ್ನು ತಿನ್ನುತ್ತೇನೆ ಎಂದು ಗರ್ಜಿಸುತ್ತದೆ. ಆಗ ಕುಂಟ ಕುರುಡ ಇಬ್ಬರೂ ಧೈರ್ಯಂ ಸರ್ವತ್ರ ಸಾಧನಂ ಎನ್ನುವಂತೆ ಉಪಾಯದಿಂದ ನಾವು ನಿನ್ನನ್ನು ತಿನ್ನುತ್ತೇವೆ ಎಂದು ತಾವು ತಂದಿದ್ದ ಮೂಳೆಯನ್ನು ಕೆಳಕ್ಕೆ ಎಸೆಯುತ್ತಾರೆ. 'ನನ್ನದು ಸಣ್ಣದು. ನಮ್ಮಣ್ಣನದು ದೊಡ್ಡದು' ಎಂದು ಭಯ ಹುಟ್ಟಿಸುತ್ತಾರೆ. ಮೊರವನ್ನು ಎಸೆದು ನಮ್ಮ ಮನೆಯವರು ಇನ್ನೂ ದೊಡ್ಡವರು ಎಂದು ಅದಕ್ಕೆ ಗಾಬರಿ ಹುಟ್ಟಿಸುತ್ತಾರೆ. ಬಾಲ ತೋರಿಸು ಎಂದಾಗ ಉಪಾಯವಾಗಿ ಒನಕೆ ತೋರಿಸುತ್ತಾರೆ. ರಾಕ್ಷಸಿಯು ದನಿಯನ್ನು ತೋರಿಸಲು ಕೇಳಿದಾಗ, ಕತ್ತೆಗೆ ಬೆಂಕಿಯ ಶಾಖಕೊಟ್ಟು ಅದು ನೋವಿನಿಂದ ಅರಚಿಕೊಳ್ಳುವಂತೆ ಮಾಡುತ್ತಾರೆ. ಆಗ ನೀವು ನನಗಿಂತ ದೊಡ್ಡವರು ಎಂದು ರಾಕ್ಷಸಿಯು ಹೆದರಿ ನಮಸ್ಕಾರ ಮಾಡುತ್ತದೆ.

ಈ ಕಥೆಯು ಅಂಗವಿಕಲರು ತಮ್ಮ ಅಂಗವಿಕಲತೆಯನ್ನು ಒಂದು ಶಾಪವನ್ನಾಗಿ ಮಾಡಿಕೊಳ್ಳದೆ ಅನೇಕ ವಿಪತ್ತುಗಳನ್ನು ಎದುರಿಸುವುದನ್ನು ಮತ್ತು ಉಪಾಯಗಾರಿಕೆಯಿಂದ ಅವನ್ನು ಗೆಲ್ಲುವುದನ್ನು ಸಂತೋಷದಿಂದ ಚಿತ್ರಿಸುತ್ತದೆ. ಹಿಂದೆ ಚರ್ಚಿಸಿದ ಮುಕಡ್ಯಾನ ಕಥೆಯಲ್ಲಿ ಅಂಗವಿಕಲತೆಯು ಅವನಿಗೆ ಅಪಮಾನ ಮತ್ತು ಸಾವಿಗೆ ಕಾರಣವಾಗುತ್ತದೆ. ಈ ಕಥೆಯಲ್ಲಿ ಅಂಗವಿಕಲತೆಯು ಗೆಲುವು ಮತ್ತು ಹರ್ಷಗಳು ಸಹಾಯಕ್ಕೆ ಬರುತ್ತವೆ. ಈ ಮೂರು ಜೀವಿಗಳು ಎತ್ತುಗಳನ್ನು ಮರಳಿತರಲು ಕಳ್ಳನ ಮನೆಗೆ ಸಾಗುತ್ತವೆ. ಎತ್ತುಗಳನ್ನು ಹುಡುಕಲು ನೇರವಾಗಿ ಕಳ್ಳನ ಮನೆಗೆ ಚೋಟಪ್ಪ ಪ್ರಾಣಿಗಳೊಂದಿಗೆ ಬರುತ್ತಾನೆ. ಸಂಜೆಯಾಗಲು

ಚೋಟಪ್ಪ ಉಪಾಯದಿಂದ ಎಲ್ಲರಿಗೂ ಅವರು ಮಾಡಬೇಕಾದ ಕೆಲಸ ಒಪ್ಪಿಸುತ್ತಾನೆ. ಅದರಂತೆ ಚೋಟ್ಯಾ ಮನೆಯಲ್ಲಿ ಎತ್ತು ಕಟ್ಟುವ ಅಂಕಣದಲ್ಲಿ ಅಡಗಿಕೊಳ್ಳುವನು. ಇಲಿಯು ಎತ್ತಿಗೆ ಮೇವು ಹಾಕುವ ಸ್ಥಳದಲ್ಲಿ ಅಡಗುತ್ತದೆ. ಚೇಳು ಚಿಮಣಿ ದೀಪ ಇಡುವ ಸ್ಥಳದಲ್ಲಿ ಅಡಗುತ್ತದೆ. ಸಗಣಿಯ ಹುಳು ದಾರಿ ಮಧ್ಯದಲ್ಲಿ ಕುಳಿತುಕೊಳ್ಳುತ್ತದೆ.

ಆಗ ಕಳ್ಳನ ತಂಗಿ ಭತ್ತ ಕುಟ್ಟುತ್ತಾ ಒಂದು ಹಾಡು ಹೇಳುತ್ತಾಳೆ. "ನಮ್ಮಣ್ಣ ಹೊಳೆಯಾಚೆಗೆ ಹೋಗಿ ಎರಡು ಎತ್ತು ತಂದನವ್ವ ತವ್ವ ತವ್ವ" ಎಂದು ಆಕೆ ಹಾಡಿದಾಗ, ಅದಕ್ಕೆ ಉತ್ತರವಾಗಿ ಚೋಟ್ಟಪ್ಪನು ಈ ರೀತಿ ಹೇಳುತ್ತಾನೆ: ' ಅವು ನಿಮ್ಮಪ್ಪನವು ಅಲ್ಲ, ನಿಮ್ಮವ್ವನವಲ್ಲ ಪುಗಸಟ್ಟೆ ಚೋಟಪ್ಪನ ಎತ್ತುಗಳು." ಇದರಿಂದ ಕಳ್ಳನ ಸೋದರಿಗೆ ಸಿಟ್ಟು ಬರುತ್ತದೆ. ಆಗ ಚೋಟಪ್ಪನು ಪರರ ವಸ್ತುಗಳನ್ನು ತನ್ನ ವಸ್ತುಗಳೆಂದು ಭಾವಿಸಿರುವ ಅವಳಲಿಗೆ ಎದುರುತ್ತರವನ್ನು ನೀಡುತ್ತಾನೆ. ಆಗ ಆಕೆ ಅಣ್ಣಾ ಕಳ್ಳ ಬಂದಿದ್ದಾನೆ ಎಂದು ಚೀರುವಳು. ಅದಕ್ಕೆ ಕಳ್ಳನು 'ಬಂದೆ. ದೀಪ ಹಚ್ಚು. ಅವನನ್ನು ಹಣ್ಣುಗಾಯಿ ಮಾಡಿದರಾಯಿತು' ಎಂದು ಹೇಳುವನು. ಆದರೆ ದಾರಿಯಲ್ಲಿದ್ದ ಸಗಣಿ ಹುಳದ ಮೇಲೆ ಕಾಲಿಟ್ಟು ಕಳ್ಳನ ತಂಗಿ ಜಾರಿಬೀಳುವಳು. ಚಿಮಣಿ ಹಚ್ಚಲು ಹೋದಾಗ ಅದರ ಕೆಳಗೆ ಇದ್ದ ಚೇಳು ಕಚ್ಚುತ್ತದೆ. 'ಅಯ್ಯೋ ಸತ್ತೆ ಅಣ್ಣಾ, ಚೇಳು ಕಡಿದಿದೆ ಬಾ' ಎಂದು ಆಕೆ ಚೀರುವಳು. ಅದೇ ಸಮಯಕ್ಕೆ ಚೋಟಪ್ಪ ಉಪಾಯದಿಂದ ಇಲಿಗೆ ಎತ್ತನ್ನು ಕಟ್ಟಿರುವ ಕಣ್ಣಿಯನ್ನು ಕಡಿಯಲು ಸೂಚಿಸುವನು. ಇಲಿ ಕಣ್ಣಿಯನ್ನು ಕಡಿದು ಹಾಕುತ್ತದೆ. ಆಗ ಚೋಟಪ್ಪನು ಎತ್ತುಗಳನ್ನು ತನ್ನ ಊರಿಗೆ ಮರಳಿ ತರುವನು. ಕುಬ್ಜನಾಗಿದ್ದ ಚೋಟಪ್ಪನಿಗೆ ಕಷ್ಟಗಳು ಮನುಷ್ಯ ವರ್ಗಕ್ಕೆ ಸೇರಿದ ಕಳ್ಳರಿಂದ ಬರುತ್ತವೆ. ಆದರೆ ಪ್ರಾಣಿಗಳ ಕೀಟಗಳ ವರ್ಗಕ್ಕೆ ಸೇರಿದ ಜೀವಿಗಳು ಕರುಣೆಯಿಂದ ಅವನ ಸಹಾಯಕ್ಕೆ ನಿಲ್ಲುತ್ತವೆ. ಅರಿವುಳ್ಳ ಮಾನವರು ಕೆಟ್ಟದನ್ನು ಮಾಡಿದರೆ, ಅರಿವಿಲ್ಲದವು ಎನ್ನಲಾಗುವ ಜೀವಗಳು ಹೆಚ್ಚಿನ ಮಾನವೀಯತೆ ಮೆರೆಯುತ್ತವೆ. ಇಲ್ಲಿ ಕಥೆಯು ಅಂಗವಿಕಲರ ಉಪಾಯಗಾರಿಕೆಯನ್ನು ವಿಶೇಷವಾಗಿ ಹೇಳುವುದಿಲ್ಲ. ಆದರೆ ಕಷ್ಟಪಟ್ಟು ಕೆಲಸ ಮಾಡುವ ಶ್ರಮಸಂಸ್ಕೃತಿ ಇರುವ ವ್ಯಕ್ತಿಗಳನ್ನು ಈ ನೆಲದ ಮೇಲಿನ ಜೀವಿಗಳು ರಕ್ಷಿಸುತ್ತವೆ ಎಂದು ಸೂಚಿಸುತ್ತದೆ. ದುಡಿಮೆ ಮಾಡುವವರಿಗೆ ಅಂಗವಿಕಲತೆ ಎನ್ನುವುದು ಒಂದು ತೊಡಕಲ್ಲ ಎಂದು ಕಥೆ ಸೂಚಿಸುತ್ತದೆ.

ಸಾಮಾನ್ಯವಾಗಿ ಅಂಗವಿಕಲರಾದವರಿಗೆ ವಿವಾಹದ ಸಮಸ್ಯೆ ತಲೆದೋರುತ್ತದೆ. ಅಂಗ ಊನವಾದ ಪುರುಷರಿಗೆ ಯಾರೂ ಹೆಣ್ಣನ್ನು ಕೊಟ್ಟು ಮದುವೆ ಮಾಡುವುದಿಲ್ಲ. ಊನತೆ ಇದ್ದವನಿಗೆ ಅವರಂತಹ ಊನವುಳ್ಳ ಹೆಣ್ಣನ್ನೇ ಮದುವೆಯಾಗುವ ಪ್ರಸಂಗಗಳು ಬರುತ್ತವೆ. ಅಂಗವಿಕಲರು ಆರ್ಥಿಕವಾಗಿ ಸಬಲರಿದ್ದರೆ ಬಡವರು ತಮ್ಮ ಹುಡುಗಿಯನ್ನು ಅಂತಹವರಿಗೆ ಕೊಡುತ್ತಾರೆ. ಇದು ವಾಸ್ತವಿಕ. ಈ ಕುರಿತ ಘಟನೆಗಳನ್ನು ನಮ್ಮ ಸುತ್ತಮುತ್ತ ಗಮನಿಸಬಹುದು.

'ಚೋಟಪ್ಪ ಗೇಣಪ್ಪ' ಎಂಬ ಜನಪದ ಕಥೆಯೊಂದರಲ್ಲಿ ಚೋಟಪ್ಪ ಎಂಬ ಒಬ್ಬ ಅಂಗವಿಕಲನಿರುತ್ತಾನೆ. ಒಬ್ಬನು ಗೇಣಪ್ಪ ಎಂಬುವನು ತನ್ನ ಮಗಳನ್ನು ಕೊಟ್ಟು ಮದುವೆ ಮಾಡುತ್ತಾನೆ. ಹೆಸರೇ ಹೇಳುವಂತೆ ಇವರಿಬ್ಬರೂ ಕುಬ್ಜರು. ಗೇಣಪ್ಪನು ಅಳಿಯನಿಗೆ ಒಂದು ಪರುಷ ಬಟ್ಟಲು ಕೊಟ್ಟು ಅದರ ಸಹಾಯವನ್ನು ಪಡೆಯಲು ಹೇಳುತ್ತಾನೆ. ಅಳಿಯನಾದವನು ಪರುಷ ಬಟ್ಟಲಿನ ಮಹಿಮೆಯ ಬಲದಿಂದ. ಊರಿನವರಿಗೆಲ್ಲಾ ಊಟಕ್ಕೆ ಹಾಕಬೇಕೆಂದು ನಿರ್ಧರಿಸಿ ಡಂಗುರ ಸಾರುವನು. ಅದರಂತೆ ಊರಿನ ಎಲ್ಲರೂ ಬಂದು ಉಂಡು ತೇಗುವರು. ಆದರೆ ಊಟಕ್ಕೆ ಬಂದಿದ್ದ ಒಬ್ಬ ಘಾಟಿ ಮುದುಕಿಗೆ ಪರುಷಬಟ್ಟಲಿನ ಗುಟ್ಟು ತಿಳಿಯುತ್ತದೆ. ಒಬ್ಬ ಬ್ರಾಹ್ಮಣನು ಆ ಬಟ್ಟಲನ್ನು ಕದಿಯುವಂತೆ ಮುದುಕಿಗೆ ಪ್ರೇರೇಪಣೆ ನೀಡುತ್ತಾನೆ. ಮುದುಕಿಯು ಉಪಾಯದಿಂದ ಬಟ್ಟಲನ್ನು ಕದ್ದು ಹಾರುವಯ್ಯನಿಗೆ ಮುಟ್ಟಿಸುವಳು. ಬಟ್ಟಲನ್ನು ಕಳೆದುಕೊಂಡ ಅಳಿಯನು ಕಂಗಾಲಾಗುವನು.

ಈಗ ಕಥಾನಾಯಕನ ಮಾವನಾದ ಗೇಣಪ್ಪನು ಬಟ್ಟಲಿನ ಕಳ್ಳರನ್ನು ಹಿಡಿಯಲು ಒಂದು ತಂತ್ರ ಹೂಡುವನು. ಅವನು ಉಪಾಯದಿಂದ ಕಳ್ಳರನ್ನು ಗುರುತಿಸಲು ಅಳಿಯನ ಪ್ರಸ್ತ ಮಾಡಿಸುತ್ತೇನೆಂದು ಡಂಗುರ ಹೊಯ್‌ಹಾಕಿಸುವನು. ಆಗ ಊರಜನರು ಕಲೆಯುವರು. ಆಗ ಗೇಣಪ್ಪನು ಒಂದು ಮಂತ್ರದ ಬಡಿಗೆಯಿಂದ ಬಂದವರಿಗೆ ಹೊಡೆಯಲು ಹೇಳುವನು. ಹೊಡೆತ ತಾಳಲಾರದೆ ಜನರು ಚೆಲ್ಲಾಪಿಲ್ಲಿ ಓಡುವರು. ದೊಣ್ಣೆಯು ಬಟ್ಟಲನ್ನು ಕದ್ದವರನ್ನು ಏನು ಮಾಡಿದರೂ ಬಿಡದೆ ಹೊಡೆಯುತ್ತದೆ. ಆಗ ಅವರು ತಪ್ಪನ್ನು ಒಪ್ಪಿಕೊಂಡು ಕದ್ದ ವಸ್ತುಗಳನ್ನು ಮರಳಿ ತಂದುಕೊಡುವರು. ಆಗ ಬಡಿಗೆಯು ಬಡಿಯುವುದನ್ನು ನಿಲ್ಲಿಸುತ್ತದೆ. ಹೀಗೆ ಮೋಸಹೋಗುವ ಚೋಟಪ್ಪನಿಗೆ ಬುದ್ಧಿವಂತನಾದ ಗೇಣಪ್ಪನು ಅಳಿಯನ ವಸ್ತುಗಳನ್ನು ಉಪಾಯದಿಂದ ಮರಳಿ ದೊರಕಿಸಿಕೊಡುವಲ್ಲಿ ಸಫಲನಾಗುತ್ತಾನೆ.

ಮತ್ತೊಂದು ಜನಪದ ಕಥೆಯಲ್ಲಿ ಗಿಡ್ಡವ್ವ ಎನ್ನುವವಳು ಬರುತ್ತಾಳೆ. ಆಕೆಗೆ ಪೂರಿ ತಿನ್ನುವ ಆಸೆ. ಇದನ್ನು ಆಕೆ ಗಂಡನಿಗೆ ಹೇಳಿಕೊಳ್ಳುತ್ತಾಳೆ. ಆಗ ಅವಳ ಗಂಡ ಗಿಡ್ಡಪ್ಪ ಕಿರಾಣಿ ಅಂಗಡಿಗೆ ಕೈಚೀಲ ತೆಗೆದುಕೊಂಡು ಹೊರಡುತ್ತಾನೆ. ಅಂಗಡಿಗೆ ಬಂದು ಹಿಟ್ಟಿನ ಧಾರಣೆ ಕೇಳುತ್ತಾನೆ. ಎಣ್ಣೆಧಾರಣೆ ಕೇಳುತ್ತಾನೆ. ಈ ಹಿಟ್ಟು ಎಣ್ಣೆ ಸರಿಯಾಗಿಲ್ಲ. ಒಳ್ಳೆಯ ಹಿಟ್ಟು ಎಣ್ಣೆ ಕೊಡು ಎಂದು ತಗಾದೆ ಮಾಡುತ್ತಾನೆ. ಒಳ್ಳೆಯ ಹಿಟ್ಟು ಎಣ್ಣೆ ತರಲು ಅಂಗಡಿಯವನು ಒಳಗೆ ಹೋಗುವನು. ಆಗ ಗಿಡ್ಡಪ್ಪ ಹೊಂಚು ಹಾಕಿ ಹಿಟ್ಟು ಎಣ್ಣೆಯನ್ನು ತನ್ನ ಚೀಲಕ್ಕೆ ಹಾಕಿಕೊಳ್ಳುವನು. ಸರಿಯಾಗಿದ್ದ ಹಿಟ್ಟುಎಣ್ಣೆ ಅಂಗಡಿಯವನು ತಂದಾಗ ಉಪಾಯದಿಂದ ನನಗೆ ಈ ಧಾರಣೆ ಹಿಡಿಸುವುದಿಲ್ಲ ಎಂದು ಮನೆಗೆ ಬರುವನು. ತದನಂತರ ಗಿಡ್ಡಪ್ಪನು ಮಾಡಿದ ಮೋಸವು ಅಂಗಡಿಯವನಿಗೆ ತಿಳಿಯುತ್ತದೆ.

ಗಿಡ್ಡಪ್ಪನು ಮನೆಗೆ ಬಂದು ಒಲೆ ಉರಿಸಲು ಬೇಕಾದ ಕಟ್ಟಿಗೆ ತರಲು ಹೊರಡುತ್ತಾನೆ. ಕಟ್ಟಿಗೆಗೆಂದು ಮರ ಹತ್ತಿದಾಗ ಒಂದು ಕರಡಿಯು ತಿನ್ನುತ್ತೇನೆ ಎಂದು ಬೆದರಿಸುತ್ತದೆ. ಆಗ ಗಿಡ್ಡಪ್ಪನು ತಪ್ಪಿಸಿಕೊಳ್ಳುವುದಕ್ಕೆ ಉಪಾಯದಿಂದ 'ಹೆಂಡತಿ ಗಿಡ್ಡವ್ವ ಪೂರಿ ಮಾಡುತ್ತಾಳೆ. ತಿನ್ನಲು ರಾತ್ರಿ ಮನೆಗೆಬಾ' ಎಂದು ಆಹ್ವಾನ ಕೊಡುತ್ತಾನೆ. ವಾಸ್ತವದಲ್ಲಿ ಕಾಡಿನ ಕ್ರೂರ ಪ್ರಾಣಿಗಳಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲದೆ ಮನುಷ್ಯರು ಅವಕ್ಕೆ ಆಹಾರವಾಗುವರು. ಆದರೆ ಈ ಕಥೆಯಲ್ಲಿ ಪ್ರಾಣಿಗಳು ಮನುಷ್ಯರ ಮಾತು ಕೇಳುತ್ತವೆ. ಹೀಗೆ ಗಿಡ್ಡಪ್ಪನು ಕಷ್ಟಬಂದಾಗಲೆಲ್ಲ ಧೃತಿಗೆಡದೆ ಉಪಾಯ ಮಾಡುತ್ತ ತನ್ನ ಎದುರಾಳಿಗಳಿಗೆ ಸುಳ್ಳು ಹೇಳಿ ತಪ್ಪಿಸಿಕೊಳ್ಳುತ್ತಿರುತ್ತಾನೆ. ಗಿಡ್ಡವ್ವ ಪೂರಿ ಮಾಡಿ ತಿಂದು ಮಲಗುವ ಹೊತ್ತಿನಲ್ಲಿ ಕರಡಿ ಮನೆಗೆ ಬರುತ್ತದೆ. ಆಗ ಗಿಡ್ಡಪ್ಪನು ಕಾಡಿನಲ್ಲಿ ಕರಡಿಗೆ ಮಾತು ಕೊಟ್ಟ ಬಗ್ಗೆ ತಿಳಿಸುವನು. ಆಗ ಗಿಡ್ಡಪ್ಪ-ಗಿಡ್ಡವ್ವ ಕುಳ್ಳಗಿದ್ದು, ದೇವರಿಗೆಂದು ಇಟ್ಟಿದ್ದ ಕುಂಬಳಕಾಯಿಯಲ್ಲಿ ಅಡಗಿ ಕುಳಿತುಕೊಳ್ಳುವರು. ಕರಡಿಯು ಮನೆಯೊಳಗೆ ಬರುತ್ತದೆ. ಹಿಟ್ಟು ಎಣ್ಣೆ ಕಳ್ಳತನ ಮಾಡಿದ್ದ ಗಿಡ್ಡಪ್ಪನನ್ನು ಹಿಡಿಯಲು ಬಂದಿದ್ದ ಅಂಗಡಿಯವನು ಮನೆಯಲಿಲದ್ದ ಕರಡಿಯನ್ನು ನೋಡಿ ಭಯದಿಂದ ಓಡುವನು. ಕಾದ ಎಣ್ಣೆಯನ್ನು ಮೂಸುವಾಗ ಗಿಡ್ಡವ್ವ ಹೂಂಕರಿಸಲು ಕರಡಿ ಹೆದರಿ ಎಣ್ಣೆಯಲ್ಲಿ ಮುಖ ಹಾಕಿ ಸುಟ್ಟಿಕೊಳ್ಳುತ್ತದೆ ಮತ್ತು ಮನೆಬಿಟ್ಟು ಓಡಿಹೋಗುತ್ತದೆ.

ಅಂಗವಿಕಲರಾದ ಗಿಡ್ಡವ್ವ ಗಿಡ್ಡಪ್ಪ ದಂಪತಿಗಳು ಹೀಗೆ ಬಡವರಾಗಿದ್ದರೂ, ದೈಹಿಕ ಕೊರತೆಗಳಿದ್ದರೂ ತಮ್ಮ ಬದುಕುವ ಛಲದಿಂದ, ಬುದ್ಧಿವಂತಿಕೆಯಿಂದ ಉಪಾಯ ಹೂಡಿ ಬದುಕುವರು. ಕಥೆಯು ದೈಹಿಕ ಊನವಿದ್ದರೂ ಬುದ್ಧಿಶಕ್ತಿಯಿದ್ದರೆ ಈ ಲೋಕದಲ್ಲಿ ಬದುಕುವುದು ಸಾಧ್ಯ ಎಂಬುದನ್ನು ಈ ಮೂಲಕ ಸೂಚಿಸುತ್ತಿದೆ.

ಜನಪದ ಕಥೆಗಳಲ್ಲಿ ಅಂಗವಿಕಲರು ತಮ್ಮ ಚಾತುರ್ಯದಿಂದಲೊ ದೈವದ ಇಲ್ಲವೇ ಪ್ರಾಣಿಪಕ್ಷಿಗಳ ನೆರವಿನಿಂದಲೂ ಸಾಧನೆ ಮಾಡುವ ಆಶಯವು ಸಾಮಾನ್ಯವಾಗಿ ಕಾಣುತ್ತದೆ. ಏಳು ಜನ ಸೋದರರು ನಡೆಯಲು ಬಾರದವನೆಂದು ಕೊನೆಯ ಸೋದರರನ್ನು ನಡುದಾರಿಯಲ್ಲೇ ಬಿಟ್ಟುಹೋಗುವುದು, ಅವನ ಅಳಲಿಗೆ ದೇವತೆಗಳು ಕೆಳಗಿಳಿದು ಬಂದು, ಅವನಿಗೆ ಬೇಕಾದ ವರಗಳನ್ನು ಕೊಟ್ಟು, ಅವನ ದೈಹಿಕ ಗಟ್ಟಿತನ ಇರುವ ಸೋದರರು ಮಾಡಲಾಗದ ಸಾಧನೆಯನ್ನು ಮಾಡುವಂತೆ ಮಾಡುವುದು, ಅಂಗವಿಕಲನು ರಾಜಕುಮಾರಿಯನ್ನು ಕೊನೆಯಲ್ಲಿ ಮದುವೆಯಾಗಿ ತನ್ನನ್ನು ತಿರಸ್ಕರಿಸಿದ ಸೋದರರನ್ನು ಮನ್ನಿಸುವುದು-ಈ ಬಗೆಯ ಘಟನೆಗಳಿರುವ ಕಥೆಯು ಕರ್ನಾಟಕದ ಎಲ್ಲ ಕಡೆಗಳಲ್ಲಿಯೂ ಸಿಗುತ್ತದೆ. ಈ ಕಥೆಯ ಮೂಲಕ ಜನಪದರು ಈ ದೈಹಿಕಕೊರತೆಗಳನ್ನು ನೀಗಿಕೊಳ್ಳುವ ಹೊಸ ಕಾಲ್ಪನಿಕ ಸಾಧ್ಯತೆಗಳನ್ನು ಸೂಚಿಸುತ್ತಿದ್ದಾರೆ ಎನಿಸಿದರೂ, ಆಳದಲ್ಲಿ ಈ ಕಥೆಯು ಅಂಗವಿಕಲರಲ್ಲಿಯೂ ಜೀವನದ ಶ್ರದ್ಧೆಯನ್ನು ಹುಟ್ಟಿಸುವ ಆಶಯವನ್ನು ಉಳ್ಳದ್ದಾಗಿದೆ.

ಸಮಾಜದಲ್ಲಿ ಅಂಗವಿಕಲತೆಯು ಒಂದು ಶಾಪವಾಗಿದೆ. ವ್ಯಕ್ತಿಗೆ ಅಂಗವಿಕಲ ಅವಸ್ಥೆಯು ಕೆಲವೊಮ್ಮೆ ಹುಟ್ಟಿನಿಂದ ಬರಬಹುದು; ಕೆಲವೊಮ್ಮೆ ಅಪಘಾತಗಳಿಂದ ಬರಬಹುದು. ಕಣ್ಣು ಕಾಣಿಸದಂತೆ ಕುರುಡಾಗುವುದು, ಕಾಲು ಮುರಿದು ಕುಂಟಾಗುವುದು, ಕಿವಿ ಕೇಳದಂತಾಗುವುದು, ಬುದ್ಧಿ ಮಂದವಾಗಿರುವುದು, ಸರಿಯಾಗಿ ಸ್ಪಷ್ಟವಾಗಿ ಮಾತನಾಡಲು ಸಾಧ್ಯವಾಗದೆ ಉಗ್ಗುವುದು, ದೇಹವು ಕುಬ್ಜಗೊಳ್ಳುವುದು-ಇವೆಲ್ಲವೂ ವ್ಯಕ್ತಿಯನ್ನು ಸಮಾಜದಲ್ಲಿ ಅಸಮಾನ ನೆಲೆಯಲ್ಲಿ ನಿಲ್ಲಿಸುತ್ತವೆ. ಎಲ್ಲರ ಹಾಗೇ ಬದುಕುವುದಕ್ಕೆ ಈ ವಿಕಲತೆ ಇರುವವರಿಗೆ ಕಷ್ಟವಾಗುತ್ತದೆ. ದೈಹಿಕ ಕಷ್ಟದ ಜೊತೆಗೆ ಸಮಾಜದಿಂದ ಅಪಮಾನವನ್ನೂ ಅವರು ಅನುಭವಿಸಬೇಕಾಗುತ್ತದೆ.

ಈ ಹಿನ್ನೆಲೆಯಲ್ಲಿ ಅಂಗವಿಕಲರು ಸಿರಿವಂತರಿರಲಿ ಬಡವರಿರಲಿ, ಮೇಲುಜಾತಿಗೆ ಸೇರಿರಲಿ, ಕೆಳಜಾತಿಯವರಿರಲಿ, ಗಂಡಸಾಗಿರಲಿ ಹೆಂಗಸಾಗಿರಲಿ, ಚಿಕ್ಕವರಾಗಿರಲಿ ದೊಡ್ಡವರಾಗಿರಲಿ, ಮುಜುಗರಗಳಿಗೆ ಒಳಗಾಗುತ್ತಲೇ ಬದುಕಬೇಕಾಗುತ್ತದೆ. ಸಾಮಾಜಿಕ ಅಪಮಾನ ಮತ್ತು ದೇಹ ಕೊಡುವ ಅಸಹಕಾರಗಳ ನಡುವೆ ಅವರ ಬಾಳು ಸವಾಲಿನದಾಗುತ್ತದೆ. ಹೀಗಾಗಿ ಅವರು ನಿತ್ಯವೂ ಸಂಘರ್ಷ ಮಾಡುತ್ತಲಿರಬೇಕಾಗುತ್ತದೆ. ಈ ಸಂಘರ್ಷದ ಭಾಗವಾಗಿ ಅವರಲ್ಲಿ ಅನಿವಾರ್ಯವಾಗಿ ಉಪಾಯಗಾರಿಕೆ ಹುಟ್ಟುತ್ತದೆ. ದೈಹಿಕ ವಿಕಲತೆಯೇ ಬುದ್ಧಿಯನ್ನು ಹೆಚ್ಚು ಚುರುಕುಗೊಳಿಸುತ್ತದೆ. ದೇಹಶಕ್ತಿಯಿಂದ ಮಾಡಲಾಗದ ಕೆಲಸಗಳನ್ನು ಬುದ್ಧಿಶಕ್ತಿ ಮಾಡತೊಡಗುತ್ತದೆ. ಜನಪದ ಕಥೆಗಳಲ್ಲಿ ಅಂಗವಿಕಲರು ಅತೀ ಬುದ್ಧಿವಂತರಾಗಿ ಚಿತ್ರಣಗೊಳ್ಳುವುದು ಗಮನಾರ್ಹ. ಅವರು ತಮ್ಮ ಬುದ್ಧಿಶಕ್ತಿಯಿಂದ ಸಮಾಜದ ಬಲಿಷ್ಠರನ್ನು ಸೋಲಿಸಬಲ್ಲರು. ದೈವವನ್ನು ಮಣಿಸಬಲ್ಲರು ಇಲ್ಲವೇ ಒಲಿಸಿಕೊಳ್ಳಬಲ್ಲರು. ಪ್ರಾಣಿ ಪಕ್ಷಿ ಕೀಟಗಳ ನೆರವನ್ನು ಪಡೆಯಬಲ್ಲರು. ರಾಕ್ಷಸರನ್ನು ಹೆಸರಿಸಬಲ್ಲರು. ನಿಜಜೀವನದಲ್ಲಿ ಯಾವೆಲ್ಲವನ್ನು ಮಾಡಲು ಕಷ್ಟವೊ ಅವೆಲ್ಲವನ್ನೂ ಅವರು ಮಾಡುವಂತೆ ಚಿತ್ರಿಸುವ ಜನಪದ ಕಥೆಗಳ ಆಶಯವು ಬಹಳ ಸ್ಪಷ್ಟವಾಗಿದೆ. ಈ ಬಗೆಯ ಕಥೆಗಳನ್ನು ಕಟ್ಟುವುದರ ಹಿಂದೆ ನಮ್ಮ ಜನಪದರ ಸಮಾಜವಾದಿ ದೃಷ್ಟಿಕೋನ ಕೆಲಸ ಮಾಡಿದೆ. ದುರ್ಬಲರಿಗೆ ಹೆಚ್ಚಿನ ಪಾಲು ನ್ಯಾಯ ಸಿಗಬೇಕೆನ್ನುವುದೇ ಆ ದೃಷ್ಟಿಕೋನವಾಗಿದೆ. ಅಂಗವಿಕಲರು ಅಂತಿಮವಾಗಿ ಗೆಲ್ಲುವ ಆಶಯವುಳ್ಳ ಕಥೆಗಳು ಜಗತ್ತಿನಾದ್ಯಂತ ಸಿಗುವುದುನ್ನು ನೋಡಿದರೆ, ಈ ಸಮಾಜವಾದಿ ಆಶಯವು ಜಗತ್ತಿನ ಎಲ್ಲ ಸಮಾಜಗಳಲ್ಲಿ ಮಿಡಿಯುತ್ತಿದೆ ಎಂದು ಗೊತ್ತಾಗುವುದು.

ಅಧ್ಯಾಯ-೭

# ಸಮಾರೋಪ

## ಅಧ್ಯಯನ ಫಲಿತಗಳು

ಕನ್ನಡ ಜನಪದ ಕಥೆಗಳಲ್ಲಿ ನಮ್ಮ ಸಮಾಜದ ವಾಸ್ತವಿಕಥೆಯು ನೇರವಾಗಿ ಪ್ರಕಟವಾಗಿರುವುದಿಲ್ಲ. ಅದು ಅನೇಕ ಛಾಯೆಗಳ ರೂಪದಲ್ಲಿ ಅಭಿವ್ಯಕ್ತಗೊಂಡಿರುತ್ತದೆ. ನೆರಳುರೂಪಗಳಲ್ಲಿ ಸಮುದಾಯಗಳ ಅನೇಕ ಆಶೋತ್ತರಗಳು ಪ್ರಕಟವಾಗಿವೆ. ಅದರಲ್ಲೂ ಸಮಾಜದ ದಮನಿತ ವರ್ಗಗಳ ಕಷ್ಟ, ಸುಖ, ಸಂಭ್ರಮ, ಹೋರಾಟ, ಕನಸು, ಗೆಲುವು ಸೋಲುಗಳು ಪ್ರಕಟವಾಗಿವೆ. ಇಲ್ಲಿ ದಮನಿತರೆಂದರೆ, ದಲಿತರು ಮಹಿಳೆಯರು ಮಕ್ಕಳು ಅಂಗವಿಕಲರು ಮುದುಕರು ಭಿಕ್ಷುಕರು ಬಡವರು. ಈ ಗುಂಪಿಗೆ ಸೇರಿದ ಜನರು ತಮ್ಮ ಜೀವನದಲ್ಲಿ ಅನೇಕ ಬಗೆಯ ಸೆಣಸಾಟ ಮಾಡಬೇಕಾಗುತ್ತದೆ. ತಮಗೆ ಪೂರಕವಾದ ಸನ್ನಿವೇಶ ಇಲ್ಲದಿದ್ದಾಗ ಈ ಸೆಣಸಾಟ ಮತ್ತಷ್ಟು ಕಠಿಣವಾಗುತ್ತದೆ. ಆಗ ತಮ್ಮ ಅಸ್ಥಿತ್ವಕ್ಕಾಗಿ ಈ ವರ್ಗದ ಜನರು ನೇರವಾಗಿ ವ್ಯವಸ್ಥೆಯನ್ನು ಮುಖಾಮುಖಿ ಮಾಡಬೇಕಾಗುತ್ತದೆ. ಆದರೆ ಈ ಮುಖಾಮುಖಿಯಲ್ಲಿ ಅವರ ಸೋಲಿನ ಮುಖವನ್ನು ಕಾಣಬೇಕಾಗಬಹುದು. ಕೆಲವೊಮ್ಮೆ ಈ ಸೋಲು ದುರಂತವಾಗಿಯೂ ಪರಿಣಮಿಸಬಹುದು. ಇಂತಹ ಅಸಹಾಯಕಥೆಯು ಬದುಕುಳಿಯಲು ಅನೇಕ ಉಪಾಯಗಾರಿಕೆಗಳನ್ನು ಹುಟ್ಟಿಸುತ್ತದೆ. ಈ ಉಪಾಯಗಾರಿಕೆಗಳು ಅವರ ಪರಿಸ್ಥಿತಿಯ ಒಳಗೆ ಹುಟ್ಟುವ ವಿಮೋಚನೆಯ ಹಾದಿಗಳಾಗಿರುತ್ತವೆ. ಕನಸುಗಳಾಗಿರುತ್ತವೆ ಹಾಗೂ ಪ್ರತಿಭಟನೆಯ ಅಸ್ತ್ರಗಳೂ ಆಗಿರುತ್ತವೆ. ಸಮುದಾಯಗಳು ಕಠೋರ ವಾಸ್ತವದಲ್ಲಿ ಈಡೇರಿಸಿಕೊಳ್ಳಲು ಸಾಧ್ಯವಾಗದ ಆಶೋತ್ತರಗಳನ್ನು ತಮ್ಮ ಕನಸಿನಲ್ಲಿ ಪಡೆದುಕೊಳ್ಳಲು ಯತ್ನಿಸುತ್ತಾರೆ. ಆ ಕನಸುಗಳ ವಿಸ್ತರಣೆಯ ಹಾಗೆ ಜನಪದ ಕಥೆಗಳು ಕಂಡುಬರುತ್ತವೆ.

ಈ ಉಪಾಯಗಾರ ನಾಯಕರು ಕೇವಲ ಜನಪದ ಕಥೆಗಳಲ್ಲಿ ಮಾತ್ರ ಕಂಡುಬರುವುದಿಲ್ಲ. ಇವರು ಆಧುನಿಕ ಕನ್ನಡ ಕಥೆ, ಕಾದಂಬರಿ, ನಾಟಕ, ಲಲಿತ ಪ್ರಬಂಧ, ಆತ್ಮಕಥೆ ಮುಂತಾದ

ಪ್ರಕಾರಗಳಲ್ಲಿಯೂ ಕಂಡು ಬರುವರು. ಅದರಲ್ಲೂ ದಲಿತರಿಂದ ದಮನಿತ ವರ್ಗಗಳಿಂದ ಬಂದ ಲೇಖಕರು ಬರೆದಿರುವ ಆತ್ಮಕಥೆಗಳಲ್ಲಿ ಇಂತಹ ಜಾಣ ಜಾಣೆಯರು ಹೆಚ್ಚಾಗಿ ಕಂಡುಬರುವರು. ಉದಾಹರಣೆಗೆ ದಲಿತ ಲೇಖಕರಾದ ಸಿದ್ದಲಿಂಗಯ್ಯನವರ 'ಊರುಕೇರಿ' ಅರವಿಂದ ಮಾಲಗತ್ತಿಯವರ 'ಗೌರ್ಮೆಂಟ್ ಬ್ರಾಹ್ಮಣ' ಎಂ.ಎಂ.ಮದರಿಯವರ 'ಗೊಂದಲಿಗ್ಯಾ' ಮುಂತಾದ ಆತ್ಮಕಥೆಗಳಲ್ಲಿ ಇಂತಹ ದಮನಿತ ವರ್ಗದಿಂದ ಬಂದ ಜಾಣ ಪಾತ್ರಗಳನ್ನು ಕಾಣಬಹುದು. ಜನಪದ ಕಥೆಗಳ ಉಪಾಯಗಾರ ನಾಯಕರೂ ಸಾಮಾನ್ಯವಾಗಿ ದಲಿತರು ಮತ್ತು ಕೇಳಜಾತಿಯವರು. ಜನಪದ ಕಥೆಗಳನ್ನು ಹೇಳುವ ಕಲಾವಿದರು ಕೂಡ ಇದೇ ವರ್ಗದಿಂದ ಬಂದವರು ಹೆಚ್ಚು. ಹೀಗಾಗಿಯೇ ದಲಿತರು ಬರೆದ ಆತ್ಮಕಥೆಗಳಲ್ಲಿ ಕಾಣಿಸುವ ಉಪಾಯಗಾರ ನಾಯಕರಿಗೂ ಜನಪದ ಕಥೆಗಳಲ್ಲಿ ಬರುವ ಉಪಾಯಗಾರ ನಾಯಕರಿಗೂ ಅನೇಕ ಸಾಮ್ಯಗಳಿವೆ.

ಆಧುನಿಕ ಕನ್ನಡ ಸಾಹಿತ್ಯದ ಕಥೆ ಮತ್ತು ಕಾದಂಬರಿಗಳಲ್ಲಿಯೂ ಇಂತಹ ಅನೇಕ ಜನಪದ ಜಾಣಗಾರರು ಬೇರೊಂದು ರೂಪದಲ್ಲಿ ಅವತರಿಸುವುದನ್ನು ನೋಡಬಹುದು. ಕುವೆಂಪುರವರ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ನಾಯಿಗುತ್ತಿ; 'ಕಾನೂರು ಹೆಗ್ಗಡತಿ' ಕಾದಂಬರಿಯ ಬೇಲರಸಿದ್ದ ಬಾಡುಗಳ್ಳ ಸೋಮ; ದೇವನೂರ ಮಹಾದೇವ ಅವರ ಕಾದಂಬರಿ 'ಕುಸುಮಬಾಲೆ'ಯಲ್ಲಿ ಬರುವ ಗಾರಸಿದ್ಮಾವ ಪಕಾಳಯ್ಯ ಮುಂತಾದ ಪಾತ್ರಗಳನ್ನು ಇಲ್ಲಿ ಉಲ್ಲೇಖಿಸಬಹುದು. ಕುಂ.ವೀ. ಅವರ 'ದೇವರ ಹೆಣ' ಕಥೆಯಲ್ಲಿ ಬರುವ ತೊಣ್ಣಿ ಪಾತ್ರವು ಅದೇ ತೆರನಾದ್ದು. ಅದೇ ರೀತಿ ಬೆಸಗರಹಳ್ಳಿ ರಾಮಣ್ಣ, ದೇವನೂರ ಮಹಾದೇವ, ಮುಂತಾದವರು ಬರೆದಿರುವ ಸಣ್ಣಕಥೆಗಳು ಇಂತಹ ಉಪಾಯಗಾರ ನಾಯಕ ನಾಯಕಿಯರಿಂದ ತುಂಬಿಕೊಂಡಿರುವುದನ್ನು ಗಮನಿಸಬಹುದು. ಕುಂ.ವೀಯವರು ಇಂತಹ ಚಾಲಾಕಿ ನಾಯಕರನ್ನು ತಮ್ಮ ಕಥಾಸಾಯಕರಾಗಿ ಮತ್ತೆ ಮತ್ತೆ ಚಿತ್ರಿಸುತ್ತಾರೆ. ಈ ಅರ್ಥದಲ್ಲಿ ಆಧುನಿಕ ಕಥೆ, ಕಾದಂಬರಿಗಳು ಜನಪದ ಕಥೆಗಳ ವಿಸ್ತರಣೆಯಂತೆ ತೋರುತ್ತವೆ.

ಯಾವುದೇ ಸಮಾಜದಲ್ಲಿ ಸೃಷ್ಟಿಯಾಗುವ ಸಂಪತ್ತು ಆ ಸಮಾಜದ ಎಲ್ಲರಿಗೂ ಸಮಾನವಾಗಿ ವಿತರಣೆಯಾಗಬೇಕು. ಒಂದು ಸಮಾಜದಲ್ಲಿ ಇರುವ ಎಲ್ಲರಿಗೂ ತಮ್ಮ ಅಭಿಪ್ರಾಯವನ್ನು ಮುಕ್ತವಾಗಿ ವ್ಯಕ್ತಪಡಿಸುವ ಅವಕಾಶವಿರಬೇಕು. ದುಡಿಮೆಗಾರರಿಗೆ ಅವರ ದುಡಿಮೆಗೆ ತಕ್ಕ ಫಲ ಸಿಗುವಂತಿರಬೇಕು. ಅದು ಆರೋಗ್ಯವಂತ ಸಮಾಜದ ಲಕ್ಷಣ. ಆದರೆ ಸಾಮಾಜಿಕ ಅಸಮಾನತೆ, ಆರ್ಥಿಕ ಅಸಮಾನತೆ ಇರುವ ಸಮಾಜದಲ್ಲಿ ಇರುವ ದುರ್ಬಲರನ್ನು ಕಡೆಗಣಿಸುವುದು ದೃಷ್ಟಿಕೋನ ಸಾಮಾನ್ಯವಾಗಿರುತ್ತದೆ. ಅಂತಹ ಸಮಾಜದಲ್ಲಿ ಅನಿವಾರ್ಯವಾಗಿ ದುರ್ಬಲರು ಬದುಕುಳಿಯುವುದಕ್ಕಾಗಿ ಒಳದಾರಿಗಳನ್ನು ಶೋಧಿಸುತ್ತಿರುತ್ತಾರೆ. ಈ ಒಳದಾರಿಗಳು ಅವರ ಜಾಣ್ಮೆಯ ಸಂಗತಿ ಆಗಿರುವಂತೆಯೇ ಆಯಾ ಸಮಾಜದ ಮೇಲಿನ ವಿಮರ್ಶೆಯೂ ಆಗಿರುತ್ತವೆ.

## ಅಧ್ಯಯನದ ಸಾಧ್ಯತೆಗಳು

ಕನ್ನಡದಲ್ಲಿ ಜನಪದ ಕಥೆಗಳ ಮೇಲೆ ಹಲವಾರು ಅಧ್ಯಯನಗಳು ನಡೆದಿವೆ. ಇನ್ನೂ ಬಹಳಷ್ಟು ಅಧ್ಯಯನಗಳು ನಡೆಯಬೇಕಾದ ಅಗತ್ಯವಿದೆ. ಯಾಕೆಂದರೆ, ಹಲವಾರು ಅಧ್ಯಯನಗಳಿಗೆ ತನ್ನನ್ನು ತೆರೆದುಕೊಳ್ಳುವಷ್ಟು ಸಮೃದ್ಧವಾದ ಸಾಹಿತ್ಯ ಅಲ್ಲಿದೆ. ಆಧುನಿಕ ಸಾಹಿತ್ಯದ ಚರ್ಚೆಯು ಸಂಶೋಧನೆಯಲ್ಲಿ ಪ್ರಧಾನಸ್ಥಾನ ಪಡೆದುಕೊಂಡಿದೆ. ಜನಪದ ಸಾಹಿತ್ಯಕ್ಕೆ ಸಂಬಂಧಿಸಿರುವ ಜನಪದ ಕಥೆಗಳಲ್ಲಿ ಕಾಣಿಸುವ ಜಾಣನಾಯಕ–ನಾಯಕಿಯರು ಕೇವಲ ವರ್ತಮಾನದ ಬದುಕಿನಲ್ಲಿ ಕ್ರಿಯಾಶೀಲವಾಗಿಲ್ಲ. ಅವರು ಕನ್ನಡ ಸಾಹಿತ್ಯದ ಬೇರೆ ಬೇರೆ ಪ್ರಕಾರಗಳಲ್ಲಿ ಕಾಣಿಸಿಕೊಳ್ಳುತ್ತಾರೆ. ಈ ಅರ್ಥದಲ್ಲಿ ಆಧುನಿಕ ಕನ್ನಡ ಕಥನ ಸಾಹಿತ್ಯವು ಜನಪದ ಕಥನ ಸಾಹಿತ್ಯದ ವಿಸ್ತರಣೆ ಎನ್ನಬಹುದು. ಈ ಹಿನ್ನೆಲೆಯಲ್ಲೆ ಜನಪದ ಕಥನ ಸಾಹಿತ್ಯ ಆಧುನಿಕ ಕಥನ ಸಾಹಿತ್ಯವು ಹೇಗೆ ಪಡೆದುಕೊಂಡಿದೆ ಎಂಬುದನ್ನು ಎರಡನ್ನು ಒಟ್ಟಿಗೆ ಇಟ್ಟು ನೋಡುವ ಸಾಧ್ಯತೆ ಇದೆ.

ಜನಪದ ಕಥೆಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಉಪಾಯಗಾರ ನಾಯಕರು ಎಂಬ ಆಶಯ ಇಟ್ಟುಕೊಂಡು ಅಧ್ಯಯನ ಮಾಡಲಾಗಿದೆ. ಈ ಆಶಯಕ್ಕೆ ಮುಖ್ಯವಾಗಿ ಬಳ್ಳಾರಿ ಮತ್ತು ಹೈದ್ರಾಬಾದ ಭಾಗದ ಜನಪದ ಕಥೆಗಳನ್ನು ಬಳಸಿಕೊಳ್ಳಲಾಗಿದೆ. ಕರ್ನಾಟಕ ರಾಜ್ಯದ ಬೇರೆ ಬೇರೆ ಭಾಗದ ಜನಪದ ಕಥೆಗಳನ್ನು ಬಳಸಿಕೊಂಡು ಈ ಅಧ್ಯಯನವನ್ನು ಇನ್ನೂ ವಿಸ್ತಾರವಾಗಿ ಅಧ್ಯಯನ ಮಾಡುವ ಸಾಧ್ಯತೆ ಉಳಿದಿದೆ.

ಜನಪದ ಕಥೆಗಳಲ್ಲಿ ಉಪಾಯಗಾರ ನಾಯಕರು ಎಂಬ ಆಶಯದಂತೆ ಜನಪದ ಕಥೆಗಳಲ್ಲಿ ವರ್ಗಸಂಘರ್ಷ ಪರಿಕಲ್ಪನೆ, ಮಹಿಳೆಯರ ಚಿತ್ರಣಗಳು, ಅಡಗೂಲಜ್ಜಿಯ ಪಾತ್ರಗಳು, ಮಕ್ಕಳ ಪಾತ್ರಗಳು, ರೈತಾಪಿ ಸಂಸ್ಕೃತಿ, ವ್ಯಾಪಾರಿಗಳ ಚಿತ್ರಣ, ಕಳ್ಳತನದ ಪರಿಕಲ್ಪನೆ, ಪ್ರಭುತ್ವದ ಪರಿಕಲ್ಪನೆ, ಹಾದರ ಪರಿಕಲ್ಪನೆ ಇತ್ಯಾದಿ ಪರಿಕಲ್ಪನೆಗಳ ಮೂಲಕ ಅಧ್ಯಯನ ಮಾಡುವ ಸಾಧ್ಯತೆಗಳಿವೆ.

ಕನ್ನಡ ಜನಪದ ಕಥೆಗಳಲ್ಲಿ ಬರುವ ಉಪಾಯಗಾರ ಪಾತ್ರಗಳನ್ನು ಹಾಗೂ ಕನ್ನಡ ದಲಿತ ಸಾಹಿತ್ಯದಲ್ಲಿ ಬರುವ ಉಪಾಯಗಾರ ಪಾತ್ರಗಳನ್ನು ಇಟ್ಟುಕೊಂಡು ತೌಲನಿಕ ಅಧ್ಯಯನವನ್ನು ಮಾಡುವ ಸಾಧ್ಯತೆ ಇದೆ. ಇದರ ವಿಸ್ತರಣೆಯಾಗಿ ಒಟ್ಟಾರೆ ಆಧುನಿಕ ಕನ್ನಡದ ಕಥೆ ಕಾದಂಬರಿಗಳಲ್ಲಿ ಬರುವ ಈ ಜಾಣನಾಯಕರನ್ನು ಈ ಅಧ್ಯಯನ ಒಳಗೊಳ್ಳಬಹುದು.

ಕನ್ನಡ ಜನಪದ ಉಪಾಯಗಾರ ನಾಯಕರು ಕನ್ನಡ ಜನಪದ ಕಥೆಗಳಿಗೆ ಸೀಮಿತವಲ್ಲ. ಈ ಬಗೆಯ ಜಾಣನಾಯಕರು ಭಾರತದ ಜಗತ್ತಿನ ಜನಪದ ಕಥೆಗಳಲ್ಲಿ ಕಂಡುಬರುತ್ತಾರೆ. ಈ ಹಿನ್ನೆಲೆಯಲ್ಲಿ ಕನ್ನಡದ ಜನಪದ ಕಥೆಗಳ ನಾಯಕರನ್ನು ಜಗತ್ತಿನ ಜನಪದ ನಾಯಕರ ಜೊತೆ ಹೆಚ್ಚು ತೌಲನಿಕ ಅಧ್ಯಯನ ಮಾಡುವ ಸಾಧ್ಯತೆಯಿದೆ.

## ಅನುಬಂಧಗಳು

೧. ಅಭ್ಯಾಸಸೂಚಿ

ಅ. ಪ್ರಾಥಮಿಕ ಆಕರಗಳು

ಆ. ಪರಾಮರ್ಶನ ಗ್ರಂಥಗಳು

೨. ಸಂಪ್ರಬಂಧದಲ್ಲಿ ಚರ್ಚೆಯಾಗಿರುವ ಮುಖ್ಯ ಕತೆಗಳು

೩. ಜಾಣನಾಯಕರ ಆಶಯಗಳು

# ೧. ಅಭ್ಯಾಸಸೂಚಿ

## ಅ. ಪ್ರಾಥಮಿಕ ಆಕರಗಳು


ಬಿರಾದಾರ ಎಂ, ಲಠ್ಠೆ ಎಂ.ಎಸ್, ಹೆಂಡಿ ಬಿ.ಬಿ(ಸಂ), ಜನಪದ ನೂರೆಂಟು ಕಥೆಗಳು, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೧೯೮೭

ರಾಜಪ್ಪ ಟಿ.ಎಸ್. (ಸಂ), ರಾಯಚೂರು ಜಿಲ್ಲೆಯ ಜನಪದ ಕಥೆಗಳು, ಸಾಗರ ಪ್ರಕಾಶನ, ಬೆಂಗಳೂರು, ೧೯೭೬

ರಾಜಪ್ಪ ಟಿ.ಎಸ್. (ಸಂ), ಬಳ್ಳಾರಿ ಜಿಲ್ಲೆಯ ಜನಪದ ಕಥೆಗಳು,ಸಾಗರ ಪ್ರಕಾಶನ, ಬೆಂಗಳೂರು, ೧೯೭೯

ರಾಮಾನುಜನ್ ಎ.ಕೆ., ಭಾರತೀಯ ಜನಪದ ಕಥೆಗಳು, (ಸಂ), (ಅನು), ಮಹಾಬಲೇಶ್ವರರಾವ್, ನ್ಯಾಷನಲ್ ಬುಕ್‌ಟ್ರಸ್ಟ್ ಇಂಡಿಯಾ, ೨೦೦೨

ಹಂಪನಾ (ಸಂ), ಕನ್ನಡ ಜನಪದ ಕಥೆಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೩


## ಆ. ಪರಾಮರ್ಶನ ಗ್ರಂಥಗಳು


ಅಂಬಳಿಕೆ ಹಿರಿಯಣ್ಣ, ಜಾನಪದ ಪರಿಭಾವನೆ, ಸಂವಹನ ಪ್ರಕಾಶನ, ಶಿವರಾಂಪೇಟೆ, ಮೈಸೂರು, ೨೦೦೧

ಕರೀಗೌಡ ಬೀಚನಹಳ್ಳಿ, ಕಥೆ ಮತ್ತು ಹಾಡು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೩

ಕ್ಯಾತನಹಳ್ಳಿ ರಾಮಣ್ಣ ಮತ್ತು ಬೈರೇಗೌಡ ಚಿಕ್ಕಮರಳಿ, ಜೀ.ಶಂ.ಪ.ಜಾನಪದ, ಕರ್ನಾಟಕ ಸಂಘ (ರಿ), ಎಂ.ಎಲ್.ಶ್ರೀಕಂಠೇಗೌಡ ಸಂಶೋಧನಾ ಕೇಂದ್ರ, ಮಂಡ್ಯ, ೨೦೦೭

ಚಂದ್ರಶೇಖರ ಕಂಬಾರ, ದೇಶಿಯ ಚಿಂತನೆ, ಅಂಕಿತ ಪ್ರಕಾಶನ, ಬಸವನಗುಡಿ, ಬೆಂಗಳೂರು, ೨೦೦೪

ಜೀಶಂಪ, ಜಾನಪದ ಕೆಲವು ಮುಖಗಳು, ಚೇತನ ಬುಕ್ ಹೌಸ್, ಮೈಸೂರು, ೧೯೯೬

ದೇಜಗೌ, ೨೦೦೧, ಜನಪದ ಅಧ್ಯಯನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

ನಾಯಕ ಹಾ.ಮಾ., ಜಾನಪದ ಸ್ವರೂಪ, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು, ೧೯೭೧

ಮೊಗಳ್ಳಿ ಗಣೇಶ (ಸಂ), ದಲಿತ ಚಿಂತನೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

ರಾಮಚಂದ್ರೇಗೌಡ ಓ.ಶಿ., ಕನ್ನಡ ಜನಪದ ಕಥಾವರ್ಗಗಳು, ಮೈಸೂರು, ವಿಶ್ವವಿದ್ಯಾಲಯ, ಮೈಸೂರು

ಜೆ.ಲಕ್ಕಪ್ಪಗೌಡ, ಜೀಶಂಪ ಸಂಸ್ಮರಣೆ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗೂರು, ೧೯೯೫

ಲಕ್ಕಪ್ಪಗೌಡ ಜೆ. (ಸಂ), ಜಾನಪದ ಮಾಲೆ ಸಂ.೧, ೧೯೯೭, ಜಾನಪದ ಕೈಪಿಡಿ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

ವೀರಣ್ಣ ದಂಡೆ, 'ಹೈದ್ರಾಬಾದ್ ಕರ್ನಾಟಕದ ಜನಪದ ಕಥೆಗಳು ಒಂದು ಚಿಂತನೆ, ದೇಸಿ, ಭಾಗ್ಯಶ್ರೀ ಎಂಟರ್‌ಪ್ರೈಸಸ್, ೨೦೦೩

ವೀರಣ್ಣ ದಂಡೆ, ಕಲ್ಬುರ್ಗಿ ಜಿಲ್ಲೆಯ ಜನಪದ ಕಥೆಗಳ ಆಶಯ ಮತ್ತು ಮಾದರಿಗಳು, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ೨೦೦೩

ಶಂಕರನಾರಾಯಣ ತೀ.ನಂ., ಸಂಕೀರ್ಣ ಜಾನಪದ ಕಥೆಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೪

ಸಂಧ್ಯಾರೆಡ್ಡಿ ಕೆ.ಆರ್., ಕನ್ನಡ ಜನಪದ ಕಥೆಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೨

### ಇ. ಕೋಶಗಳು

ನರಸಿಂಹಾಚಾರ್ ಡಿ.ಎಲ್. (ಪ್ರಧಾನ ಸಂಪಾದಕ), ಕನ್ನಡ ನಿಘಂಟು – ಸಂ.೧, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೦

ಪ್ರಶಾಂತ ಮಾಡ್ತ (ಸಂ), ಕನ್ನಡ ಪದನಿಧಿ, ಕನ್ನಡ ಸಂಘ, ಸಂತ ಜೋಸೆಫರ ಕಾಲೇಜು, ಬೆಂಗಳೂರು, ೨೦೦೭

## ೨. ಸಂಪ್ರಬಂಧದಲ್ಲಿ ಚರ್ಚೆಯಾಗಿರುವ ಮುಖ್ಯ ಕಥೆಗಳು

* **ಬಡವರ ಉಪಾಯಗಾರಿಕೆಯ ಸ್ವರೂಪ**
  - ೧. ರಾಜರಾಣಿ
  - ೨. ಮಾತಿನ ಮಲ್ಲಣ್ಣ ಸಾವುಕಾರ ಶೇಷಪ್ಪ
  - ೩. ಅಳಿಯನ ಜಾಣತನ
  - ೪. ಒಕ್ಕಲಿಗ ಸಂಗಣ್ಣ
  - ೫. ಚಿನ್ನದ ಹೊಗೆಯಾಡುವ ಊರಗೊಬ್ಬ ಬಡವ

* **ಮುದುಕರ ಉಪಾಯಗಾರಿಕೆ ಸ್ವರೂಪ**
  - ೧. ಅತ್ತೆಸೊಸೆ
  - ೨. ಹಣಮಗೇರಿ ಹಣಮವ್ವ
  - ೩. ರಾಜ–ರಾಣಿ
  - ೪. ರಾಜಕುಮಾರಿಯ ಸಾಹಸ

* **ಮಹಿಳೆಯರ ಉಪಾಯಗಾರಿಕೆ ಸ್ವರೂಪ**
  - ೧. ನಗನಾರಿಹೂವಿನ ದೇವಕನ್ನಿಕೆ
  - ೨. ನಾ ಹೆಚ್ಚಾ ನೀ ಹೆಚ್ಚಾ
  - ೩. ಶಿವನ ಮಗಳು ಸೀತಾದೇವಿ

* **ಚಿಕ್ಕವರ ಉಪಾಯಗಾರಿಕೆಯ ಸ್ವರೂಪ**
  - ೧. ಬಡಿಗ್ಯಾನ ಜಾಣತನ
  - ೨. ಏಳು ಹೆಡಿಸರ್ಪ
  - ೩. ಅನ್ನದಾನದ ಫಲ
  - ೪. ಹುಡಗನ ಜಾಣತನ
  - ೫. ಬೇಡಿದ್ದು ಕೊಡುವ ಉಂಗುರ

* **ಅಂಗವಿಕಲರ ಉಪಾಯಗಾರಿಕೆಯ ಸ್ವರೂಪ**
  - ೧. ಕುಂಟು ಕುರುಡ
  - ೨. ಚೋಟಪ್ಪ
  - ೩. ಚೋಟಪ್ಪ ಗೆಣಪ್ಪ
  - ೪. ಗಿಡಪ್ಪ ಗಿಡ್ಡವ್ವ
  - ೫. ಇರುಳ ಗಣ್ಣಿನ ಅಳಿಯ
  - ೬. ಮುಕಡ್ಯಾನ ಕಥೆ
  - ೭. ಜೊಜ್ಜ ಮಾತು

## ೩. ಜಾಣನಾಯಕರ ಆಶಯಗಳು

* **ಬುದ್ಧಿವಂತರು ಮತ್ತು ಮೂರ್ಖರು**

೧. ಅನುಭವದಿಂದ ಮಾತುಗಳ ಬೆಲೆ ಗೊತ್ತಾಗುವುದು
೨. ಹೆಂಗಸಿಗೆ ಗುಟ್ಟನ್ನು ಹೇಳಬಾರದು
೩. ಒಂಟಿಯಾಗಿ ಪ್ರಯಾಣ ಮಾಡಕೂಡದು
೪. ಪರಸ್ಥಳದಲ್ಲಿ ನಿದ್ರಿಸುವುದಕ್ಕಿಂತ ಎಚ್ಚರದಿಂದಿರವುದು ಒಳ್ಳೆಯದು
೫. ಹೆಂಡತಿಯನ್ನು ತವರೂರಿಗೆ ಬಹಳ ಕಾಲ ಕಳುಹಿಸ ಕೂಡದು
೬. ಬೇರೆ ಬೇರೆ ಬಣ್ಣದ ಒಂದೇ ಸಿಹಿತಿನಿಸನ್ನಿಟ್ಟು ಹೇಗೆ ಅವುಗಳ ರುಚಿ ಒಂದೇ ರೀತಿ ಇರುತ್ತದೋ ಹಾಗೇ ಎಲ್ಲ ಹೆಣ್ಣುಗಳು ಒಂದೇ ರೀತಿ ಎಂಬುದನ್ನು ಪುರುಷನಿಗೆ ಒಬ್ಬ ಹೆಣ್ಣು ಮನವರಿಕೆ ಮಾಡುವುದು

* **ಬುದ್ಧಿವಂತಿಕೆ**

೧. ಕಳ್ಳನ ಹೆಣವನ್ನು ರಸ್ತೆಗಳಲ್ಲಿ ಕೊಂಡೊಯ್ದು ಅವನಿಗಾಗಿ ಅಳುವವರನ್ನು ಗುರುತಿಸುವುದು
೨. ಸಾಕ್ಷಿದಾರ ಮೂರ್ಖನಾಗಿ ಮಾತಾಡುವಂತೆ ಮಾಡಿ ಪುರಾವೆಯನ್ನು ಅಲ್ಲಗಳೆಯುವುದು
೩. ನಿಜಸಂಗತಿಯನ್ನೇ ನಿರೂಪಿಸಿದ ಮನುಷ್ಯ ಅದು ಕನಸು ಎಂದು ಹೇಳಿ ಸಾಕ್ಷ್ಯವನ್ನು ನಾಶ ಮಾಡುವುದು
೪. ಕೃತಘ್ನ ಪ್ರಾಣಿಯನ್ನು ಪುನಃ ಬಂಧನಕ್ಕೆ ಒಳಗು ಮಾಡುವುದು
೫. ಸಮುದ್ರಕ್ಕೆ ಬೆಂಕಿ ಬಿದ್ದಿತ್ತು ಎಂದು ಹೇಳಿ ಮತ್ತೊಂದು ಸಂಗತಿಯಲ್ಲಿನ ಅಸಂಗತತೆಯನ್ನು ಬಯಲು ಮಾಡುವುದು
೬. ಗುಟ್ಟಾಗಿ ಕೇಳಿಸಿಕೊಂಡ ಮಾತಿನಂತೆ ವರ್ತಿಸಿದ ಕಳ್ಳರು ಹಣದ ಪೆಟ್ಟಿಗೆ ಎಂದು ಭಾವಿಸಿ ಕಲ್ಲು ತುಂಬಿದ ಪೆಟ್ಟಿಗೆಯನ್ನು ಒಯ್ಯುವುದು

**(ಕನ್ನಡ ಜನಪದ ಕಥೆಗಳು, ಸಂಧ್ಯಾರೆಡ್ಡಿ ಕೆ.ಆರ್, ಪುಟ–೪೪೪, ೪೪೫)**

* **ಜಾಣ ಮನುಷ್ಯ**

೧. ಕುದುರೆಯ ಅಪಹರಣ
೨. ನೇಣಿಗೆ ತಕ್ಕ ಮನುಷ್ಯನನ್ನು ಆರಿಸಲಾಯಿತು
೩. ಶ್ರೀಮಂತ ಮತ್ತು ಬಡ ಒಕ್ಕಲಿಗ
೪. ಹಾದರಕ್ಕೆ ಬಂದು ಸತ್ತ ಏಳು ಜನರ ಹೆಣಗಳನ್ನು ಸಾಗಿಸಲಾಯಿತು
೫. ಜಾಣತನ ಮತ್ತು ಪೆದ್ದತನ
೬. ಅನೇಕ ಹೆಸರಿನ ಹುಡುಗ
೭. ಹುಲಿ, ಕುರಿ, ಕಡಲಿಕಡಪಿ–ನೀರಿನ ಹಳ್ಳ ದಾಟುವುದು ಹೇಗೆ?
೮. ಗಡಿಗೆ ಒಂದು ಮಗುವನ್ನು ಹಾಕಿತು. ಆದರೆ ಅದು ಸತ್ತು ಹೋಯಿತು
೯. ಕರಡಿಯನ್ನು ಕಂಬಳಿಯೆಂದು ಭಾವಿಸಿದ್ದು
೧೦. ಅದೃಷ್ಟದ ಆಕಸ್ಮಿಕ ಘಟನೆಗಳು– ದೈವಾನುಕೂಲಗಳು
೧೧. ಸೊಣಗಳ ಬೇಟೆಗಾರ
೧೨. ಡಾಕ್ಟರನು ಎಲ್ಲವನ್ನೂ ತಿಳಿದಿರುತ್ತಾನೆ
೧೩. ಸುದೈವದ ಹೊಡೆತ **(ದೇಸಿ, ವೀರಣ್ಣ ದಂಡೆ, ಪುಟ–೩೦೬)**

